# ನಾಡ ಕಥೆಗಳು

ಹಿರಿಯರಿಗೆ ಮಾತ್ರ

ಆರು ಕತೆಗಳ ಸಂಗ್ರಹ



ಕಿರಿಯರ ಪ್ರಪಂಚ, ಉಡುಪಿ.

‘ತೊದಲ್ನುಡಿ’ ಗ್ರಂಥಮಾಲೆ—ನುಡಿ ೩

# ನಾಡ ಕತೆಗಳು

(ಭಾಗ ೧)

(ವಿವಿಧ ಕತೆಗಾರರಿಂದ)

ದಶಂಬರ ೧೯೫೭

ಕಿರಿಯರ ಪ್ರಪಂಚ ಉಡುಪಿ

ಬೆಲೆ: ೦-೪-೦

ಮುದ್ರಕರು:
ನವಯುಗ ಪ್ರೆಸ್,
ಉಡುಪಿ.







ನಾಲ್ಕನೆ ಮುದ್ರಣ

## ಕಥೆಗಳು ಮತ್ತು ಕಥೆಗಾರರು



ವಿಕ್ರಯಾಧಿಕಾರಿಗಳು:
ನವಭಾರತ ಪುಸ್ತಕ ಭಂಡಾರ,
ಉಡುಪಿ.

## ೧ ತಿರುಪತಿ ಮುಡುಪಿನ ಕಳವು

ನಡುಗುತ್ತಿನ ಗುಡ್ಡಶೆಟ್ಟರೆಂದರೆ ಪಡುಗ್ರಾಮದಲ್ಲೆಲ್ಲಾ ಭಾರಿ 'ಕಾರ್ಬಾರಿ'. ಈ 'ಭಾರಿ ಕಾರ್ಬಾರಿ' ಎಂಬ ಶೆಟ್ಟರ ಕರಿ ಕೀರ್ತಿಲತೆಯು ನಾಚಿಕೆ ಮುಳ್ಳಿನಂತೆ ನೋಡನೋಡುತ್ತ ಪ್ರಬಲವಾಗಿದ್ದಿತು. ಕಳೆಯೆಂದು ಕೀಳಲು ಶಕ್ತಿಯಿಲ್ಲದೆ, ಬೆಳೆಯೆಂದು ಬೆಳೆಸುವ ಅನ್ಯಾಯಕ್ಕೆ ಅಂಜಿ ಜನರೆಲ್ಲಾ ಮೂಗಿಗೆ ಬೆರಳಿಟ್ಟು, "ಮನುಷ್ಯನ ಅವಸ್ಥೆ ಹೀಗೇ ಎಂದು ಹ್ಯಾಗೆ ಹೇಳುವುದು! ಬೂದಿರಾಶಿಯಲ್ಲಿದ್ದ ಬೆಳ್ಳನಾಯಿ ಗಾದಿಯ ಮೇಲೇರಿದಂತೆ ಈ ಗುಡ್ಡ, ಎಲ್ಲಿದ್ದವ ಎಲ್ಲಿಗೆ ಬಂದ! ಈ ಕಲಿಕಾಲದಲ್ಲಿ ನ್ಯಾಯನೀತಿಗೆ ಬೆಲೆಯಿಲ್ಲಪ್ಪ! ಅನ್ಯಾಯ ಮಾಡಿದವರಿಗೇನೇ ಕಾಲ!" ಎಂದು ಒಳಗೊಳಗೆ ಗೊಣಗುತ್ತಿದ್ದರೇ ಹೊರತು ಗುಡ್ಡಶೆಟ್ಟರ ಅಬ್ಬರದ ಇದಿರಲ್ಲಿ ಎಲ್ಲರೂ ಮೂಕರಾಗಿ ಕಣ್ಣುಕಣ್ಣು ಬಿಡುತ್ತಿದ್ದರು. ಒಂದೊಮ್ಮೆ ಬೂದಿಬುರುಕನಾಗಿ ಭಂಡ ಉಂಡಾಡಿಯೆನಿಸಿದ್ದ ಗುಡ್ಡಶೆಟ್ಟಿಯು ಗಂಡುಗಲಿಯೆನಿಸಿ ಪ್ರಚಂಡ ದರ್ಪ ಬೀರಲು ಕಾರಣವೇನೆಂದು ಒಂದೇ ಶಬ್ದದಲ್ಲಿ ಹೇಳಿಬಿಡುವುದಾದರೆ ಪುಂಡರೊಡೆಯನಾದುದು. ಉಂಡಾಡಿಯಾದ ಗುಡ್ಡನು ಗಂಡುಗಲಿ ಗುಡ್ಡಶೆಟ್ಟರೆನಿಸಿ ಪ್ರತಾಪ ಬೀರಲು ಇದೇ ಕಾರಣ. 'ಅಡ್ನಾಡಿ'ಯಾಗಿ ಮನೆಮನೆ ಅಡ್ಡಾಡಿ, ವಿಭೂತಿ ಪೆಟ್ಟಿಗೆಯಲ್ಲಿದ್ದ ವೆಂಕಟ್ರಮಣನ ಗಂಟನ್ನೋ, ಭೂತದ ಗುಡಿಯಲ್ಲಿದ್ದ ಕಂಚಿನ ಮೂರ್ತಿ, ಘಂಟಾಮಣಿಗಳನ್ನೋ ಕದ್ದೊಯ್ಯುವ ಚಿಕ್ಕ ಚೋರನಾಗಿ, ತನ್ನ ಮುಂದಿನ ಪ್ರಭಾವದ ಪ್ರಬಲ ಕಟ್ಟಡಕ್ಕೆ ಕೆಸರುಕಲ್ಲು ಹಾಕಿದಾಗ, "ಇಷ್ಟು ಧೈರ್ಯದ ಕಳ್ಳನಾರು? ಅವನಿಗೆ ಭೂತವೇ ತಕ್ಕ ಪ್ರತಿಫಲ ಕೊಡದಿರದು" ಎಂದು ಶಪಿಸಿ, ಜನರು ಸುಮ್ಮನಿದ್ದರೇ ಹೊರತು ಬೂದಿಬುರುಕ ಗುಡ್ಡನ ಮೇಲೆ ಒಂದಿಷ್ಟು ಸಂಶಯಪಡಲಿಲ್ಲ.

ಹೀಗಿರುತ್ತಾ ಒಂದು ದಿನ ಪಡುಗ್ರಾಮದ ವಿಷ್ಣುಮೂರ್ತಿ ದೇವಾಲಯದ ಚಿನ್ನ, ಆಭರಣ, ವಿಗ್ರಹ ಕೂಡ ಕದ್ದೊಯ್ಯಲ್ಪಟ್ಟಿರುವುದೆಂಬ ಗೊಂದಲವೆದ್ದಿತು. ಪೋಲೀಸರು ಬಂದರು. ೨, ೩ ದಿವಸ ಪತ್ತೆ ನಡೆಸಿದರು, ವಿಚಾರಿಸಿದರು, 'ರಿಕಾರ್ಡು' ಮಾಡಿದರು, ಕಂಕುಳಲ್ಲಿಟ್ಟರು; ಬಂದ ದಾರಿ ಹಿಡಿದರು.

ಜನರಿಗೆಲ್ಲಾ ದೇವಸ್ಥಾನದ ಹತ್ತಿರದಲ್ಲಿರುವ, ಮುಂಜಾನೆಯಿಂದ

ಮುಸ್ಸಂಜೆ ವರೆಗೆ ಸಜೀವ ಸೈಕಲಿನಂತೆ, ಓಡಾಡಿ ಮೀನು ಮಾರಿ ದಿನದ ಪಥ್ಯ ನಡಿಸುವ ಅಬ್ದುಲ್ ಖಾದ್ರಿ ಬ್ಯಾರಿಯ ಮೇಲೆ ಬಲವಾದ ಸಂದೇಹ! ಹಿಂದುವಾದ ಯಾರಿಗಾದರೂ ಹೀಗೆ ದೈವದ್ರೋಹ ಮಾಡಲು ಎದೆ ಸಾಲ ದೆಂದೂ, ಒಂದೊಮ್ಮೆಗೆ ಎದೆಗೊಂಡರೂ ರಕ್ತಕಾರಿ ಸತ್ತೇ ಹೋದಾ ನೆಂದೂ, ತಲೆಗೆಟ್ಟು ಬೀದಿಬೀದಿ ಅಲೆದಾಡಿಯಾನೆಂದೂ ಜನರ ದೃಢ ವಿಶ್ವಾಸ! ಅಂತೆಯೆ ವಿಷ್ಣುಮೂರ್ತಿಯಿದಿರಲ್ಲಿ ಅವರೆಲ್ಲರ ಶಾಪ. ಪೋಲೀ ಸರು ಬಡ ಅಬ್ದುಲ್‌ಖಾದ್ರಿಯ ಮನೆ ಜಡ್ತಿಮಾಡಿ ನಾರುವ ಒಣ ಮೀನಿನ ಕಟ್ಟಷ್ಟನ್ನು ಹೊರಹಾಕಿದರು. ಖಾದ್ರಿಯನ್ನು "ಮೇಲೆ ಕೆಳಗೆ" ಮಾಡಿದರು. ಅವನು 'ಅಲ್ಲಾ'ನ ಸಾಕ್ಷಿಯಾಗಿ "ನಾನು ಕಳಲಿಲ್ಲ" ಎಂದು ಹತ್ತಿಪ್ಪತ್ತು ಸಲಾಮು ಕೊಟ್ಟಮೇಲೆ ಬಿಟ್ಟುಬಿಟ್ಟರು. ಮುಂಚಿನ ರಾತ್ರಿ ದೇವಸ್ಥಾನದೊಳಗೆ ಬಂದು ಒಂದು ಮೂಲೆಯಲ್ಲಿ 'ಬೋದಾಳ ಶಂಕರ'ನಂತೆ ಬಿದ್ದುಕೊಂಡಿದ್ದ ಗುಡ್ಡನೇ ರಾತ್ರಿ ದೇವಸ್ಥಾನದ ಸಿಂಹ ದ್ವಾರ ತೆರೆದು, ತನ್ನ ಸಂಗಾತಿಗಳನ್ನು ಒಳಬಿಟ್ಟು, ಗರ್ಭಗುಡಿಯ ಬೀಗವನ್ನು ಕಳ್ಳ ಕೈಯಿಂದ ತೆಗೆದು, ಈ ದೊಡ್ಡ 'ಚೋರಿ' ನಡಿಸಿದು ದೆಂಬ ಸಂಶಯ ಯಾರಿಗೂ ಉಂಟಾಗಲು ಆಸ್ಪದವೀಲಿಲ್ಲ. ಕೆಲಸಮ ಯದ ನಂತರ ಪಡುಗ್ರಾಮದ ಬೀಡಿನ ಬಲ್ಲಾಳರ ಮನೆಗೆ ಕಳ್ಳರು ನುಗ್ಗಿ ದಾಗಲೂ ಗುಡ್ಡನ ಸಂಗಾತಿಗಳು ಕೆಲವರು ಕೈದುಮಾಡಲ್ಪಟ್ಟು ಶಿಕ್ಷೆಗೆ ಗುರಿಯಾದರು. ಆದರೆ ಸುದೈವಿ ಗುಡ್ಡನಿಗೇನೂ ತೊಂದರೆಯಾಗಲಿಲ್ಲ.

ಅನ್ಯಾಯಕ್ಕೆ ಒಂದಲ್ಲೊಂದು ದಿನ ಅಪಾಯ ತಪ್ಪದೆಂಬ ನಿಯ ಮದ ಹುರುಳನ್ನು ಶೆಟ್ಟರು ಗಾಳಿಗೊಡ್ಡಿಬಿಟ್ಟರು. ಅವರ ಮನೆಯು ನಡುಗುತ್ತೆನಿಸಿ ಪಡುಗ್ರಾಮದಲ್ಲಿ ಒಂದನೇ ಮನೆಯಾಯಿತು. ಯಾರ ತಲೆ ಬಡಿದಾಗಲಿ, ಯಾರ ಸೊತ್ತನ್ನು ಅಪಹರಿಸಿಯಾಗಲಿ, ಗುಡ್ಡಶೆಟ್ಟರ ಆಸ್ತಿಬದುಕು ದಿನೇದಿನೇ ಬೆಳೆಯಿತು. ವರ್ಷ ೫೦ರ ಗಡಿ ದಾಟಿದರೂ, ನಡುಪ್ರಾಯದ ಮೈಕಟ್ಟುಳ್ಳ ಅವರಲ್ಲಿ ಯೌವನವು ಕಳೆಯೇರುವಂತಿ ದ್ದಿತು. ಅವರು ದೊಡ್ಡ ಮನೆತನದ ಜಕ್ಕಜವ್ವನೆ ಹುಡುಗಿಯೋರ್ವಳನ್ನು ಎರಡನೇ ವಿವಾಹವಾದರು. ಅವರ ಮೊದಲನೇ ಹೆಂಡತಿಯ ಮಗನಿಗೆ ಹೆಣ್ಣು ಕೊಡಲು ತಾನು ಮುಂದೆ ತಾನು ಮುಂದೆ ಎಂದು ಅತಿ ಘನವಂತ ರೆನಿಸುವ ಮನೆಯವರೆಲ್ಲಾ ಮೇಲಾಡತೊಡಗಿದರು. ವಂಶಪಾರಂಪರ್ಯ

ವಾದ ಮನೆತನ, ಘನಸ್ಥಿಕೆ, ಮರ್ಯಾದೆ ಎಂಬುದೆಲ್ಲಾ ಎಂತಹ ಭ್ರಾಂತಿ ಯೆಂಬುದನ್ನು ಶೆಟ್ಟರು ಬಯಲುಮಾಡಿಬಿಟ್ಟರು ಅವೆಲ್ಲಾ ಅವರು ಬೇಡವೆಂದರೂ ಅವರ ಕಾಲಬುಡದಲ್ಲಿ ಬಿದ್ದು ಹೊರಳಾಡುತ್ತಿದ್ದವು.

ಶೆಟ್ಟರ ಐಶ್ವರ್ಯದ ಭರತಕ್ಕೆ ಇಳಿತವಿಲ್ಲದಾಯಿತು. ಪ್ರಾಯ ಹೋದಂತೆ ಆಸ್ತಿಬದುಕಿನ ಹಸಿವು ಆರಿ, ಮನಸ್ಸು ದೈವಭಕ್ತಿಯ ಕಡೆಗೆ ಹೊರಳಿತು. ತಾನು ಯಾವ ಮೂರ್ತಿಯನ್ನು ಸ್ವಹಸ್ತದಿಂದ ಕದ್ದೊಯ್ದಿದ್ದರೋ, ಅದೇ ವಿಷ್ಣುಮೂರ್ತಿ ದೇವಸ್ಥಾನವನ್ನು ಶೆಟ್ಟರು ಜೀರ್ಣೋದ್ಧಾರ ಮಾಡಿಸಿ, ರಾಶಿಪೂಜೆ ನಡೆಸಿ, ದೈವಭಕ್ತಿ ಪಾರಾಯಣರೆಂದು ಪ್ರಸಿದ್ಧರಾದರು. ಎಡೆಬಿಡದೆ ರಾಮಾಯಣ ಭಾರತಗಳ ಪಾರಾಯಣ, ಸತ್ಯನಾರಾಯಣ ಕಥಾದಿಗಳನ್ನು ನಡೆಸಿದರು. ಒಂದು ಕಾಲದಲ್ಲಿ ಮುಖ ಸಹ ತೊಳೆಯದೆ ತಂಗಳನ್ನ ನುಂಗುತ್ತಿದ್ದ ಶೆಟ್ಟರು ಈಗ ಬೆಳಿಗ್ಗೆ, “ನಾರಾಯಣ! ನಾರಾಯಣ!!” ಎಂದು ಎದ್ದು, ಮುಖ ತೊಳೆದು, ಮಿಂದು, ತುಳಸಿ ಪೂಜೆ ಮಾಡಿ, ಊಟಕ್ಕೆ ಹೋಗುವಾಗ ಅಪರಾಹ್ನ ಗಂಟೆ ೨ ಆಗುತ್ತಿದ್ದಿತು.

ಇಷ್ಟೊಂದು ಧರ್ಮನಿಷ್ಠರಾದ ಶೆಟ್ಟರು ತಿರುಪತಿಯಾತ್ರೆ ಮಾಡಿ, ತನ್ನ ಪಾಪವನ್ನೆಲ್ಲಾ ತಿರುಪತಿಯ ಪಾಪನಾಶಿನೀ ತೀರ್ಥೋದಕದಲ್ಲಿ ಮೈಕೊಳೆಯಂತೆ ತೊಳೆದುಬಿಡಬಹುದೆಂದು ಪಡುಗ್ರಾಮದ ಸುಬ್ಬಾಭಟ್ಟರು ಅವರ ಕಿವಿಗೆ ಊದಿದರು. ಶೆಟ್ಟರ ಮನೆಯ ತಿರುಪತಿಯ ಮುಡುಪೂ ಅಧಿಕವಾಗಿದ್ದಿತು. ಶೆಟ್ಟರು ಸಕುಟುಂಬವಾಗಿ ತಿರುಪತಿ ಯಾತ್ರೆ ಮಾಡುವರೆಂದಾಯಿತು. ಕೂಡಲೆ ಊರ ಒಂದೊಂದು ಮನೆಯವರಿಗೇನೇ ವೆಂಕಟರಮಣನ ನೆನಪಾಯಿತು. ಕೆಲವರಿಗೆ ಯಾವಾಗಲೋ ಮಾಡಿದ್ದ ಹರಕೆಯ ಸ್ಮರಣೆ ಬಂತು. ತುಕ್ಕು ಹಿಡಿದ ಕಾಲು ಸರಿಗೆಯು ಕೆಲವರನ್ನು ಆಗಲೇ ಎಚ್ಚರಿಸಿತು. ಅಂತೂ ಶೆಟ್ಟರೊಡನೆ ತಿರುಪತಿ ಯಾತ್ರೆಗಾಗಿ ೧೦೦ಕ್ಕಿಂತಲೂ ಮಿಕ್ಕಿದ ಜನರ ದೊಡ್ಡ ಪರಸೆ ಯೆದ್ದಿತು. ನೆರೆಕರೆಯಿಂದ ತಿರುಪತಿಗೆ ಹೋಗುವವರ ಕುರಿಮಂದೆಯನ್ನೆಲ್ಲಾ ನಡಿಸುವ ಕುರುಬನಂತಿದ್ದು, ಕಾಸು ಖರ್ಚಿಲ್ಲದೆ ಹತ್ತಿಪ್ಪತ್ತು ಸಲ ತಿರುಪತಿಗೆ ಹೋಗಿ ಬಂದಿದ್ದ ಸುಬ್ಬಾಭಟ್ಟರು ಹಿರಿಹಿರಿ ಹಿಗ್ಗಿದರು. ಶೆಟ್ಟರ ಅನುಮತಿ ಪಡೆದು ಪಾಂಡಿಚೆರಿಗೆ ಹೋಗುವವನೆಂದು ತನ್ನ ಅಳಿ

ಯನನ್ನೂ ತನ್ನೊಂದಿಗೆ ಕರೆದೊಯ್ದರು. ಶೆಟ್ಟರು ತಿರುಪತಿಯಾತ್ರೆಗೆ ಹೊರಟಾಗ ಇಡೀ ಊರೇ ಎದ್ದಂತಾಯಿತು. ಪ್ರಮುಖರಾದ ಶೆಟ್ಟರ ಹೆಗ್ಗಳಿಕೆಗೆ ತುದಿ ಮೊದಲಿಲ್ಲದಾಯಿತು.

'ರೈಲ್ವೆ ಸ್ಟೇಶನು'ಗಳಲ್ಲಿ ಪರಸೆಯವರೊಳಗೆ ಗಲಾಟೆ ನಡೆಯುವಾಗ ಭಟ್ಟರು ಅದೊಂದು ಕುಟಿಲ ವಂಚನೆಯ ತಂತ್ರ ಹೂಡಿ ಬಕ ಧ್ಯಾನ ಪರರಾಗಿದ್ದರು. ಅದಕ್ಕಾಗಿ ತನ್ನ ಅಳಿಯನನ್ನು ಸಂಗಡ ಕರೆದೊಯ್ದಿದ್ದರು. ಪ್ರತಿದಿನ ಪಾನಕಪೂಜೆ ಮಾಡಿ ಪವಿತ್ರವಾಗಿ ಇರಿಸ ಬೇಕಾಗಿದ್ದ ತಿರುಪತಿಯ ಮುಡುಪನ್ನು ಪರಸೆಯವರೇ ಇಟ್ಟುಕೊಂಡಲ್ಲಿ ಅದು ಮೈಲಿಗೆಯಾಗಬಹುದಾದುದರಿಂದ ಅದನ್ನೆಲ್ಲಾ ಒಟ್ಟುಮಾಡಿ ಒಂದು ದೊಡ್ಡ 'ಪಿಟಾರಿ'ಯೊಳಗೆ ಇಟ್ಟು ತಾನೇ ಇಟ್ಟುಕೊಳ್ಳುತ್ತಿದ್ದರು. ಪ್ರತಿದಿನ ಪಿಟಾರಿಯ ಬಾಯಿ ತೆರೆದು, ಪೂಜೆಮಾಡಿ, ಬೀಗ ಹಾಕುತ್ತಿದ್ದರು.

'ಟ್ರೈನು' ರಾತ್ರಿ ಕಾಟ್ಪಾಡಿ ಸ್ಟೇಶನಿಗೆ ಮುಟ್ಟಿತು. ತಿರುಪತಿಗೆ ಹೋಗುವವರೆಲ್ಲರೂ ಅಲ್ಲಿ ಇಳಿದು, ಬೇರೆ 'ಟ್ರೈನು' ಹತ್ತಬೇಕು. ಪಾಂಡಿಚೆರಿಗೆ ಹೋಗುವವರು ಮತ್ತೊಂದು 'ಟ್ರೈನು' ಹಿಡಿಯಬೇಕು ಪರಸೆಯೆಲ್ಲಾ ಇಳಿಯಿತು ಸುಬ್ಬಾಭಟ್ಟರೂ, ಅವರ ಅಳಿಯನೂ ಮುಡುಪಿನ 'ಪಿಟಾರಿ'ಯನ್ನು ಹೊತ್ತು ಒಂದು ಮೂಲೆಗೊಯ್ದಿಟ್ಟರು. ಪರಸೆಯವರು ತಮ್ಮ ಮುಡುಪೆಲ್ಲಾ ಸುಬ್ಬಾಭಟ್ಟರ ಹಸ್ತ ಸುರಕ್ಷಿತವಾಗಿದೆಯೆಂದು ಅದರ ಗೊಡವೆಯನ್ನೇ ಬಿಟ್ಟು, 'ಟ್ರೈನಿ'ನಿಂದ ಇಳಿದು, ಇನ್ನೊಂದಕ್ಕೆ ಹತ್ತುವ ಗಲಾಟೆಯಲ್ಲಿ ಬಿದ್ದರು. ಸುಬ್ಬಾಭಟ್ಟರ ಅಳಿಯನು "ನಾನು ಪಾಂಡಿಚೆರಿಗೆ ಹೋಗುತ್ತೇನೆ" ಎಂದು ಶೆಟ್ಟರನ್ನು ಬೀಳ್ಕೊಟ್ಟನು. ಅವನು ಪಾಂಡಿಚೆರಿ 'ಟ್ರೈನ್' ಹತ್ತಿದನೋ ಇಲ್ಲವೋ ಎಂದು ಪರೀಕ್ಷಿಸುವವರಾರು? ಅವನು ಮುಡುಪಿನ ಪಿಟಾರಿಯ ಮೇಲೆ ತನ್ನ ಧೋತರವನ್ನು ಮುಚ್ಚಿ ಸುಮ್ಮಗೆ ತೂಕಡಿಸುತ್ತಾ ಕುಳಿತುಬಿಟ್ಟನು.

ಇತ್ತ ಸುಬ್ಬಾಭಟ್ಟರು ಯಾವಾಗಲೂ ಶೆಟ್ಟರೊಡನೆಯೇ ಇರುವವರು ಈವೊತ್ತು ಬೇರೆ ಎಲ್ಲಿಯೋ ಒಂದೆಡೆ ಟ್ರೈನು ಹತ್ತಿಬಿಟ್ಟರು. ಟ್ರೈನು ತಿರುಪತಿ ಸ್ಟೇಶನಿಗೆ ಮುಟ್ಟಿತು. ಪರಸೆಯವರಲ್ಲಿ ಕೆಲವರು ಇಳಿದರು. ಇನ್ನು ಕೆಲವರು ಇಳಿಯುವ ಅವಸರದಲ್ಲಿದ್ದರು. ಆಗ ಹಠಾ

ತ್ತಾಗಿ, "ಅಯ್ಯೋ! ನನ್ನ ಮುಡುಪಿನ ಪೆಟ್ಟಿಗೆ! ಎಲ್ಲಿ ಹೋಯಿತು! ಅಯ್ಯೋಯ್ಯೋ ದೇವರೇ! ಯಾರೋ ಕದ್ದೊಯ್ದರು! ಶೆಟ್ರೆ! ಇನ್ನೇನು ಗತಿ!" ಎಂದು ಮೊರೆಯಿಡುತ್ತಾ ಸುಬ್ಬಾ ಭಟ್ಟರು ಆಗ ತಾನೇ ಟ್ರೈನಿನಿಂದ ಇಳಿದು ಶೆಟ್ಟರ ಕಡೆಗೆ ಓಡಿದರು.

"ಏನು? ಏನಾಯಿತು? ಮುಡುಪಿನ ಪಿಟಾರಿಯೇ ಕಳವಾಯಿತೇ? ಅಯ್ಯೋಯ್ಯೋ!" ಎಂದು ತಳಮಳಗೊಂಡು ಎಲ್ಲರೂ ಸುಬ್ಬಾ ಭಟ್ಟರ 'ಕಂಪಾರ್ಟ್‌ಮೆಂಟಿನ' ಕಡೆಗೆ ಧಾವಿಸಿದರು. ಶೆಟ್ಟರೂ ಇನ್ನು ಕೆಲವರೂ ಭೂತ ಹಿಡಿದ ಪಾತ್ರಿಯಂತೆ ತಲೆಬಿಚ್ಚಿ, ಕಣ್ಣು ಕೆರಳಿಸಿ, ನಖಶಿಖಾಂತ ಗಡಗುಟ್ಟಿ ನಡುಗುತ್ತಿದ್ದ ಸುಬ್ಬಾ ಭಟ್ಟರೊಂದಿಗೆ ಒಳಹೊಕ್ಕು ಹುಡುಕತೊಡಗಿದರು.

ಭಟ್ಟರು, "ಪಿಟಾರಿಯನ್ನು ಇಲ್ಲೇ ಇಟ್ಟು ಸ್ವಲ್ಪ ಕಣ್ಣಿನ ದಣಿವಾರಿಸಿದೆ. ಎದ್ದು ನೋಡುವಾಗ ಪಿಟಾರಿಯಿಲ್ಲ!" ಎಂದು ಒಂದು ಸ್ಥಳ ತೋರಿಸಿದರು. ಕೂಡಲೆ ಟ್ರೈನ್ ಹೊರಡುವ ಬಿಗಿಲಾಯಿತು. ಎಲ್ಲರೂ ದಡಬಡನೆ ಕೆಳಗಿಳಿದರು. ಮುಂದೆ ಮಾಡುವುದೇನೆಂದು ತೋಚದೆ ಎಲ್ಲರೂ ಭಯಚಕಿತರಾಗಿ ಮೂರ್ತಿಗಳಂತಾಗಿದ್ದರು. ವೆಂಕಟರಮಣನು ಇನ್ನು ಎಂತಹ ಉಪದ್ರವ ಕೊಡುವನೋ ಎಂಬ ಭಯದಿಂದ ಎಲ್ಲರೂ ಕಂಪಿಸುತ್ತಿದ್ದರು.

ಆಗ ಸುಬ್ಬಾ ಭಟ್ಟರು ಧೈರ್ಯಗೊಂಡಂತೆ ನಟಿಸಿ ಶೆಟ್ಟರನ್ನು ಕರೆದು, "ಆಗಲಿ ಶೆಟ್ರೇ! ಯಾರೋ ದೈವದ್ರೋಹಿ ದುರಾತ್ಮನು ನಮ್ಮ ಮುಡುಪನ್ನೆಲ್ಲಾ ಕದ್ದೊಯ್ದನು. ಅವನಿಗೆ ಆ ವೆಂಕಟರಮಣನೇ ತಕ್ಕ ಫಲವೀಯದಿರನು! ಅವನು ಹುಚ್ಚುತಾಗಿ ಊರೂರು ಅಲೆದಾಡದಿರನು. ನಾವೀಗ ಎಲ್ಲರೂ ಕೂಡಿ ಏನಾದರೂ ಸ್ವಲ್ಪ ಸ್ವಲ್ಪ ಹಣವನ್ನು ಕೂಡಿಸಿ ವೆಂಕಟರಮಣನಿಗೆ ಅರ್ಪಿಸಿ, ಅವನ ಸನ್ನಿಧಿಯಲ್ಲಿ ನಮ್ಮ ಮುಡುಪಿನ ಕಳ್ಳನನ್ನು ಶಪಿಸಬೇಕು!" ಎಂದು ತೀವ್ರ ಆಕ್ರೋಶದಿಂದ ನುಡಿದರು.

ಎಲ್ಲರೂ ಅದಕ್ಕೆ ಸೈಗುಟ್ಟಿ ತಾವು ಉಳಿಸಬಹುದಾದ ಅಲ್ಪ ಸ್ವಲ್ಪ ಹಣವನ್ನು ಒಟ್ಟುಮಾಡಿ ಭಟ್ಟರ ಹಸ್ತ ಕೊಟ್ಟರು. ಹತ್ತಿಪ್ಪತ್ತು ಸಲ ಹೋಗಿ ತಿರುಪತಿ ವೆಂಕಟರಮಣನ ಗಂಟಿನ ಗುಟ್ಟನ್ನೆಲ್ಲಾ ಬಲ್ಲ ಭಟ್ಟರು, "ವೆಂಕಟರಮಣನ ಕುಬೇರಸಾಲ ತೀರಿಸಿಕೊಳ್ಳಲು ಎಷ್ಟೋ ಹಣ ಬರು

ತ್ತದೆ ಇದೀಗ ನನ್ನ ಸಾಲ ತೀರಿಸಲಿಕ್ಕಾಯಿತೆ''ಂದು ಒಳಗೊಳಗೆ ನಕ್ಕು ಸಂಗ್ರಹವಾದ ಸ್ವಲ್ಪ ಹಣಕ್ಕೆ ಪಾನಕಪೂಜೆ ಮಾಡಿದರು. ಗಿರಿ ಹತ್ತುವಾಗ ಕದ್ದು ಹೋದ ಮುಡುಪಿನ ಹಣ ಒಟ್ಟು ರೂ. ೨, ೩ ಸಾವಿರವಾಗಬಹುದೆಂದು ಕೆಲವರೂ, ೧, ೧|| ಸಾವಿರವೆಂದು ಕೆಲವರೂ ಪಶ್ಚಾತ್ತಾಪಪೂರ್ವಕವಾಗಿ ವಾದಿಸುವಾಗ ಭಟ್ಟರು, "ಹೆಚ್ಚಾದರೆ ೫೦೦ ರೂಪಾಯಿ ಆಗಬಹುದು. ಹೋಗಲಿ, ನಮ್ಮ ಹೆಸರಲ್ಲಿ ಆ ಕಳ್ಳನು ಉದ್ಧಾರವಾಗಲಿ!" ಎಂದು ಒಮ್ಮೆ ವಿಕಾರ ನಗೆ ಬೀರಿಬಿಟ್ಟರು. ಶೆಟ್ಟರು ಸಿಟ್ಟಾಗಿ ಭಟ್ಟರನ್ನೊಮ್ಮೆ ದಿಟ್ಟಿಸಿದರು. ಅನಂತರ ಭಟ್ಟರು ತಲೆಬಾಗಿ ಸುಮನಿದ್ದರು!

ತಿರುಪತಿ ವೆಂಕಟರಮಣನು ಇವೆಲ್ಲವನ್ನು ನೋಡಿಯೂ ಸುಮ್ಮನಿದ್ದನು.

---

## ೨ ನಮ್ಮ ಶಾಸ್ತ್ರಗಳು

ಒಮ್ಮಿಂದೊಮ್ಮೆಗೆ ರಾಮಕೃಷ್ಣನ ಮನೆಯಲ್ಲಿ ಒಂದು ಹೊಸ ರೀತಿಯ ಗೊಂದಲವೆದ್ದಿತು. ಪಾಂಡುರಂಗಾಚಾರ್ಯರು, ಮಗನಿಗೆ ಸಂಬಂಧಿಕರೊಬ್ಬರ ಮಗಳನ್ನು ತಂದು ಮದುವೆ ಮಾಡಬೇಕೆಂಬ ಹಟವನ್ನು ಎಷ್ಟುಮಾತ್ರಕ್ಕೂ ಬಿಡಲಾರರು ರಾಮಕೃಷ್ಣನು "ಏನೇ ಆಗಲಿ, ಆ ಹುಡುಗಿಯನ್ನು ಖಂಡಿತವಾಗಿಯೂ ಮದುವೆಯಾಗೆ"ನೆಂದು ಗಟ್ಟಿ ಮನಸ್ಸು ಮಾಡಿರುವನು. ಹೀಗಾಗಿ ದೊಡ್ಡ ಗೊಂದಲವೆದ್ದು, ಆಚಾರ್ಯರು ತಮ್ಮ ಅಧಿಕಾರ ಬಲದಿಂದ "ಹಾಗಾದರೆ ನೀನು ನನ್ನ ಮನೆಯಲ್ಲೇ ಇರಲಾಗದು; ಹೊರಟು ಹೋಗು" ಎಂದು ಗರ್ಜಿಸಿದರು. ಅದಕ್ಕೆ ಮಗನು ಬೆದರುವನೆ? ಅವನೇನು ಆಗ ತಾನೆ ಬಿ ಎ. ಪ್ಯಾಸು ಮಾಡಿಲ್ಲವೆ? ಅಂದಬಳಿಕ ಮತ್ತೇಕೆ ನಿಂತಾನು? 'ಹುಂ' ಎಂದು ಹೊರಟೇಬಿಟ್ಟ. ಮಂಗಳೂರಲ್ಲೇ ಒಂದು ಉದ್ಯೋಗವನ್ನು ಸಂಪಾದಿಸಿ, ತಾನೊಲಿದ ಬಡವರ ಹುಡುಗಿಯನ್ನೇ ಮದುವೆಯಾಗಿ ಇರತೊಡಗಿದ.

ಆ ಚಿಕ್ಕ ಸಂಸಾರವು ಸುಖದ ಮಾರ್ಗದಲ್ಲಿ ಇನ್ನೂ ಕಾಲಿಟ್ಟಿಲ್ಲ. ಅಷ್ಟರಲ್ಲಿ ದುಃಖದ ಛಾಯೆಯು ಕವಿಯಿತು. ರಾಮಕೃಷ್ಣನು ಅಕಸ್ಮಾತ್ತಾಗಿ ಕಾಯಿಲೆ ಬಿದ್ದನು. ಆ ಕಾಯಿಲೆಯೇ ಪ್ರಬಲವಾಗುತ್ತ ಬಂದಿತು. ಅಂತೆಯೇ ಜೀವಿತವೂ ಸಂದೇಹದ ಸ್ಥಿತಿಯಲ್ಲಿ ಬಂದು ನಿಂತಿತು. ಈ

ವರ್ತಮಾನವನ್ನು ಕೇಳಿ ತಂದೆ ತಾಯಿ ಮೊದಲಾದ ಸಂಬಂಧಿಕರೆಲ್ಲ ಬಂದುಕೂಡಿದರು. ಅವರೊಂದಿಗೆ ಯಮನೂ ಬಂದು ತನ್ನ ಕೆಲಸವನ್ನು ಕೊನೆಗಾಣಿಸಿದನು.

ಸರಸಿಯ ಜೀವನದ ನಡುಹಗಲಿನಲ್ಲೇ ಕಗ್ಗತ್ತಲೆಯು ತಲೆದೋರಿತು. ಸಮಾಜದ ಮುಸುಕಿನ ಮರೆಯಲ್ಲಿ ನೊಂದು ಬೇಯುವ ಸಾವಿರಾರು ಬಡಜೀವಿಗಳಲ್ಲಿ ಅವಳೂ ಒಬ್ಬಳು. ಆದರೆ ಅದನ್ನು ಕೇಳುವವರಾರು? ಎತ್ತ ನೋಡಿದರೂ ಅವಳ ಕಡೆಗೆ ತಾತ್ಸಾರದ ನೋಟ! ಮಾತುಮಾತಿಗೆ 'ಕಲಿ! ಯಾವ ಗಳಿಗೆಯಲ್ಲಿ ಆ ಹುಡುಗನ ಕೈ ಹಿಡಿದಳೋ' ಎಂದು ಎಲ್ಲರೂ ಗುಣುಗುಟ್ಟುವರು! ಆದರೆ ಮಾಡುವುದೇನು? ಬಡವರ ಹೆಣ್ಣು. ಎಲ್ಲವನ್ನೂ ಕೇಳಿಯೇ ತೀರತಕ್ಕದು. ಸಾಲದುದಕ್ಕೆ ಮಾವನ ಮನೆ ಸೇರಿದ ಮರುವರುಷದಲ್ಲೇ ಅತ್ತೆಯೂ ದೈವಾಧೀನಳಾದಳು. ಅದೂ ಸೊಸೆಯ ತಪ್ಪೆಂದೇ ನಿರ್ಣಯಿಸಲ್ಪಟ್ಟು ಆ ಸಲುವಾಗಿ ಯಥೋಚಿತ ಉಡುಗೊರೆಯೂ ಸಲ್ಲದಿರಲಿಲ್ಲ.

ಗೃಹಿಣಿಯು ಸತ್ತು ಕೆಲವು ತಿಂಗಳುಗಳು ಕಳೆದಂತೆ ಆಚಾರ್ಯರು ವಿಧುರತನದ ಘೋರ ಜೀವನವನ್ನು ನೆನೆನೆನೆದು ಒಂದೇ ಸಮನೆ ಅಳತೊಡಗಿದರು. 'ನಾಲ್ಕು ಮಕ್ಕಳಾದರೇನು? ಇನ್ನು ಮದುವೆಯಾಗಬಾರದೆ? ಗಂಡಸರಿಗೆ ಆ ಅಧಿಕಾರವಿಲ್ಲವೆ? "ನಮ್ಮ ಶಾಸ್ತ್ರಗಳು" ಹಾಗೆಯೇ ಹೇಳಿಲ್ಲವೆ? ಮತ್ತೇನು?' ಎಂದು ಆಚಾರ್ಯರು ತರ್ಕಿಸತೊಡಗಿದರು. ಅದಕ್ಕೆ "ಅಲ್ಲ ಎನ್ನುವರಾರು? ಅಡ್ಡಿಯಿಲ್ಲದೆ ಆಗಬಹುದು. ಇಲ್ಲವಾದರೆ ನೋಡಿ! ನಿಮಗೆ ಇನ್ನು ಮುಂದೆ ಬಹಳ ತೊಂದರೆಯಾದೀತು" ಎಂದು ಕೃಷ್ಣಶಾಸ್ತ್ರಿಗಳು ತಮ್ಮ ಮಗಳಿಗೆ ಪ್ರಯಾಸವಿಲ್ಲದೆ ವರ ದೊರೆಯಬಹುದೆಂಬ ಆಶೆಯಿಂದ ಬಹಳವಾಗಿ ಸಾಧಿಸಿದರು. ಕೊನೆಗೆ ಹಾಗೆಯೇ ನಿರ್ಣಯವಾಯಿತು ಹುಡುಗಿಗೆ ವರ್ಷ ಹದಿನೈದು. ಬಹಳ ಅನುಕೂಲ; ಸ್ವಲ್ಪ ಕಪ್ಪು; ಹುಡುಗಿ ಚೆಂದವಿಲ್ಲವಂತೆ. ಅಷ್ಟೇ ತಾನೆ? ಅದರಿಂದೇನು? ಕುಡಿಮೀಸೆಯ ಜವ್ವನಿಗರು ಕಣ್ಣಿಡಲಾರರು. ಆತ ಏವ ಸರ್ವತೋಮುಖದಿಂದ ಶಾಸ್ತ್ರಿಗಳ ಮಗಳೇ ಯೋಗ್ಯ ವಧುವೆಂದು ಸಿದ್ಧಾಂತವಾಯಿತು. ಮದುವೆಗೆ ದಿನವಿಟ್ಟೂ ಆಯಿತು.

ಮದುವೆಯ ದಿನ ಆಚಾರ್ಯರು ಬೇಗನೆದ್ದು ನೂತನೋತ್ಸಾಹ

ದಿಂದ ಮಹಡಿಯಿಂದ ಕೆಳಗಿಳಿದುಬಂದರು. ಬಂದವರೇ ಕೆಳಗಡೆ ಗುಡಿಸುತ್ತಿದ್ದ ಸರಸಿಯನ್ನು ನೋಡಿ, 'ಛೀ! ಕಲಿ—! ಬೆಳಗಾಗುವ ಮುಂಚೆ ಸುಟ್ಟ ಮೋರೆಯನ್ನು ತೋರಿಸಿಯಾಯಿತು. ನಡೆಯಾಚೆ. ಇನ್ನೆಲ್ಲಿಯಾದರೂ ಇದಿರು ಬಂದರೆ—ಹುಂ!' ಎಂದು ಗರ್ಜಿಸಿ, ಆ ದೋಷ ನಿವೃತ್ತಿಗಾಗಿ ಹರಿಸ್ಮರಣೆ ಮಾಡುತ್ತ ಮುನ್ನಡೆದರು.

ದಿಬ್ಬಣ ಹೊರಡಲು ಇನ್ನು ಹೆಚ್ಚು ಹೊತ್ತಿಲ್ಲ. ಆಚಾರ್ಯರು ಕಿರಿಯ ಮಗನನ್ನು ಕರೆದು, 'ಶ್ಯಾಮೂ! ನಿನ್ನೆ ಕೊಟ್ಟ ಆ ರೊಕ್ಕದ ಚೀಲ ಈಚೆ ತಾ' ಎಂದರು. ಶ್ಯಾಮು ಒಳಗೆ ಓಡಿದನು. ಆದರೆ ಬೇಗ ಬರಲಿಲ್ಲ.

'ಬೇಗ ತಾರಾ' ಎಂದು ಆಚಾರ್ಯರು ಕೂಗಿದರು.

'ಕವಾಟಿನ ಬೀಗದ ಕೈ ಸಿಕ್ಕುವುದಿಲ್ಲ.'

'ಎಲ್ಲಿಗೆ ಹೋಯಿತು?'

'ಯಾರಿಗೆ ಗೊತ್ತು? ಮೇಜಿನ ಮೇಲಿಟ್ಟಿದ್ದೆ. ಅತ್ತಿಗೆಗೆ ಗುಡಿಸುವಾಗ ಸಿಕ್ಕಿತ್ತೋ ಕೇಳುತ್ತೇನೆ' ಎಂದು ಶ್ಯಾಮುವು ಅತ್ತಿಗೆಯನ್ನು ಹಲವು ತಡವೆ ಕರೆದನು. ಆದರೆ ಉತ್ತರ ಬರಲಿಲ್ಲ.

'ಸಾಯಲಿ ಅವಳು. ಅಲ್ಲೇ ಎಲ್ಲಾದರೂ ಬಿದ್ದಿದೋ ನೋಡೋ!' ಎಂದು ಸಿಟ್ಟಿನಿಂದ ಆಚಾರ್ಯರೇ ಹೊರಟರು.

ಶ್ಯಾಮುವು ಬೇಗಬೇಗನೆ ಹುಡುಕಿದನು. ಕೀಲಿಯು ಸಿಗಲಿಲ್ಲ. ಆದರೆ ಒಂದು ಕಾಗದವು ಸಿಕ್ಕಿತು.

ಆಚಾರ್ಯರು ಒಳಗೆ ಬಂದು 'ಏನು, ಸಿಕ್ಕಲಿಲ್ಲವೆ? ಏನದು?' ಎಂದು ಕಾಗದವನ್ನು ತೆಗೆದುಕೊಂಡರು. ಕಾಗದವೇನೋ ಚಿಕ್ಕದು.

'ಶ್ಯಾಮೂ—

ನಾನೀಗ ಹೋಗುತ್ತೇನೆ. ಚಿಂತಿಸಬೇಡ. ನಿಜವಾಗಿಯಾದರೆ ಅಂದು ಹೋಗದಿದ್ದುದೇ ನನ್ನ ತಪ್ಪು. ಆದರೆ ಸಮಾಜದ ನರಕಯಾತನೆಗಳನ್ನು ಅನುಭವಿಸುವುದು ನನ್ನ ಹಣೆಯಲ್ಲಿ ಬರೆದಿದ್ದಿತೋ ಏನೋ. 'ನಮ್ಮ ಶಾಸ್ತ್ರಗಳಿ'ಗೆ ತಿಳಿಯಲಾರದ ಯಾತನೆಗಳವು. ಇನ್ನೂ ಈ ಸುಟ್ಟ ಮೋರೆಯನ್ನು ಇತರರಿಗೆ ತೋರಿಸಲಾರೆನು. ನಾನು ಹೋಗುವೆನು. ನೀನು ಒಳ್ಳೆಯವನಾಗಿ ಸುಖದಿಂದ ಬಾಳಪ್ಪ.

ನಿನ್ನ—ಅತ್ತಿಗೆ'.

ಮದುವೆಯ ಗದ್ದಲವಡಗಿತು. ಎಲ್ಲರೂ 'ಸರಸೀ—ಸರಸೀ'

ಎಂದು ಹುಡುಕತೊಡಗಿದರು. ಹಲವರು ಬಾವಿಗಿಳಿದರು. ಶ್ಯಾಮುವು ತೋಟದ ಕೊಳದ ಕಡೆಗೋಡಿದನು. ನೀರಿನ ಮೇಲೆ ಘನ ಪದಾರ್ಥ ವೊಂದು ತೇಲುತಿದ್ದಿತು. ಅದನ್ನು ಕಂಡು ಬೆಚ್ಚಿಬಿದ್ದು 'ಅಯ್ಯೋ! ಅತ್ತಿಗೆ!' ಎಂದು ಬೊಬ್ಬಿಟ್ಟನು. ಜನರೆಲ್ಲರೂ ಆ ಕಡೆಗೋಡಿಬಂದರು. ಆದರೇನು ಫಲ? ಕಾರ್ಯವು ಮಿಂಚಿರುವುದು. ಇನ್ನವಳು ಎಂದೆಂದಿಗೂ ಯಾರ ಇದಿರೂ ಬರಲಾರಳು—ತನ್ನ ಸುಟ್ಟ ಮೋರೆಯನ್ನು ತೋರಿಸ ಲಾರಳು!

---

## ೩ ಅಂದು—ಇಂದು

ಅಂದು ಅದೊಂದು ದಿನ ಸಮ್ಮೂರ ರಥೋತ್ಸವವಾಗಿತ್ತು. ಎಲ್ಲೆ ಲ್ಲಿಯೂ ಗದ್ದಲ. ಭಕ್ತ ಜನರು ದೇವರ ದರ್ಶನದಲ್ಲಿ ನಿರತರಾಗಿದ್ದರು ಹೆಂಗಸರು ಹೊಸ ಸೀರೆ ಉಟ್ಟು, ಹಣೆಗೆ ಕುಂಕುಮದ ಬೊಟ್ಟಿಟ್ಟು, ಮೈತುಂಬ ಚಿನ್ನಾಭರಣ ತೊಟ್ಟು ಹಣ್ಣುಕಾಯಿ ಮಾಡಿಸುತ್ತಿದ್ದರು. ಅಂತೂ ಇಡೀ ಊರೇ ಲೀನವಾಗಿತ್ತು ಊರ ಉತ್ಸವದ ಉತ್ಸಾಹದಲ್ಲಿ.

ಆಗ ದೇವಸ್ಥಾನದ ಮುಖದ್ವಾರದಲ್ಲಿ ಒಮ್ಮಿಂದೊಮ್ಮೆಯೇ ಒಂದು ಗದ್ದಲವೆದ್ದಿತು. ಈ ಹಾಹಾಕಾರವೇನೆಂದು ತಿಳಿಯಲು ಜನರೆಲ್ಲಾ ಚೆಲ್ಲಾಪಿಲ್ಲಿಯಾಗಿ ಆ ಕಡೆಗೆ ಧಾವಿಸಿದರು. ಅಲ್ಲಿ ಒಬ್ಬಳು ಹುಡುಗಿ ಯನ್ನು ಇಬ್ಬರು ಯುವಕರು ಹಿಡಿದಿದ್ದರು. ಒಬ್ಬನು ರಟ್ಟೆ ಹಿಡಿದು ಕುಲುಕಿಸುತ್ತಿದ್ದ. ಇನ್ನೊಬ್ಬನು ಕಿವಿ ಹಿಡಿದು ಹಿಂಡುತಿದ್ದ. ಹುಡು ಗಿಯು ಪಾಪ! ಒಂದೇ ಸವನೆ ಚೀರುತ್ತಿತ್ತು. ಆದರೂ ಅನೇಕರೂ ದೂರದಲ್ಲಿ ನಿಂತು, "ಹೊಡೆಯಿರಿ ಅವಳಿಗೆ! ಒಡಿಯಿರಿ ಅವಳನ್ನು" ಎಂದು ನಿರ್ದಯರಾಗಿ ಹೇಳುತ್ತಿದ್ದರು.

ಹುಡುಗಿಯ ಹೆಸರು ಉಮ್ಮು. ನೆರೆಗ್ರಾಮದ ಬಿಲ್ಲವ ಸುಬ್ಬನ ಮಗಳು ಅವಳು. ಇದೇ ಊರ ಹೆಮ್ಮಕ್ಕಳ ಶಾಲೆಯಲ್ಲಿ ಓದುತ್ತಿದ್ದಳು. ಅವಳಿಂದು ತಿಳಿಯದೆ ತನ್ನ ಸಂಗಾತಿಗಳೊಂದಿಗೆ ದೇವಸ್ಥಾನ ಪ್ರವೇಶಿಸಿ ಬಿಟ್ಟಿದ್ದಳು. ಅದನ್ನು ನೋಡಿದ ಯಾರೊ ಈ ಗಲಾಟೆಯೆಬ್ಬಿಸಿಬಿಟ್ಟರು.

ಉಮ್ಮುವನ್ನು ನಿತ್ಯಾನಂದ ತೀರ್ಥರ ಸನ್ನಿಧಿಗೆ ಎಳೆದೊಯ್ಯಲಾ ಯಿತು. ಇವರು ದೇವಸ್ಥಾನದ ಅಧಿಕಾರಿಗಳು ಅವರ ವಸತಿಗೆ—ಅರ

ಮನೆಯಂತಹ ಮನೆಗೆ—ಮಠವೆಂದು ಹೆಸರು. ಈ ಗದ್ದಲ ತಿಳಿದ ಊರ ಪ್ರಮುಖರನೇಕರು ಬಂದು ಮಠದಲ್ಲಿ ನೆರೆದರು. ಹುಡುಗಿಯು ಬೇಡರ ಬಲೆಯಲ್ಲಿ ಸಿಲುಕಿದ ಚಿಗರಿಯಂತೆ ಕಂಗಾಲಾಗಿ ಅಂಗಣದ ಒಂದು ಮೂಲೆಯಲ್ಲಿ ಸೆರೆಯಾಗಿ ನಿಂತಿದ್ದಳು. ಅಷ್ಟರಲ್ಲಿ ತನ್ನ ಮಗಳ ಸಮಾಚಾರವನ್ನು ಕೇಳಿದ ಸುಬ್ಬನೂ ಅಲ್ಲಿಗೆ ಬಂದು ಮುಟ್ಟಿದ

"ಇದಕ್ಕೊಂದು ನಿವೃತ್ತಿಯಾಗಬೇಕಲ್ಲ" ಎಂದು ಗುತ್ತಿನ ಮುತ್ತಯ್ಯ ಶೆಟ್ಟರು ಪೀಠಿಕೆಯನ್ನೆತ್ತಿದರು—ನಾಟಕದ ಸೂತ್ರಧಾರನಂತೆ!

"ಅಬ್ಬ ಬಿಲ್ಲರ ಹುಡುಗಿಯ ಸೊಕ್ಕೆ! ದೇವಸ್ಥಾನ ಪ್ರವೇಶಿಸುವಷ್ಟು ಧೈರ್ಯ ಬಂತಲ್ಲ ಇವಳಿಗೆ!" ಎಂದು ಬೀಡಿನ ಬಲ್ಲಾಳರು ಉದ್ಗಾರ ವೆತ್ತಿದರು.

"ಕಲಿಕಾಲ! ಆಧುನಿಕ ವಿದ್ಯಾಭ್ಯಾಸದ ಫಲ"ವೆಂದರೊಬ್ಬರು ಪಂಡಿತರು.

"ಏನು ಸುಬ್ಬ! ನಿನ್ನ ಮಗಳ ದರ್ಪದಿಂದ ದೇವಸ್ಥಾನವೆಲ್ಲಾ ಭ್ರಷ್ಟವಾಯಿತಲ್ಲ! ನಾವಿದ್ದು ಫಲವೇನು? ಮಗಳ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವನ್ನು ನೀನು ಅನುಭವಿಸಬೇಕಾಗಿ ಬಂತಲ್ಲ!" ಎಂದು ನಿತ್ಯಾನಂದರು ಸ್ವರವೆತ್ತಿದರು.

"ಬುದ್ಧೀ! ಹುಡುಗಿ ಬುದ್ಧಿಯಿಲ್ಲದೆ ಮಾಡಿದ ಕಾರ್ಯ; ಆದರೂ ತಮ್ಮ ಚಿತ್ತ! ಅಪ್ಪಣೆಯಾದಂತೆ ನಡೆವನು ಈ ಬಡವನು" ಎಂದು ಕೈ ಜೋಡಿಸಿ ಸುಬ್ಬ ವಿಜ್ಞಾಪಿಸಿಕೊಂಡ.

"ಸಂಪ್ರೋಕ್ಷಣೆಗೆ ಎರಡು ವರಹ; ದಂಡವಾಗಿ ಭಂಡಾರಕ್ಕೆ ಹತ್ತು ವರಹ ಕೊಡಬೇಕು" ಎಂದರು ನಿತ್ಯಾನಂದರು.

"ಬುದ್ಧೀ! ಬಡವನ ಮೇಲೆ ಕರುಣೆದೋರಬೇಕು" ಎಂದು ಕಾಲಿಗೆ ಬಿದ್ದು ಸುಬ್ಬ ಬೇಡಿದ.

"ಇವನದೆಲ್ಲಾ ಠಕ್ಕು. ಏನಿವನಿಗೆ ಮುಂಡೆಮಾರಿ! ಅಷ್ಟು ದಂಡ ಕೊಟ್ಟೇ ತೀರಬೇಕು. ಹೆಂಡದ ದುಡ್ಡು ದಂಡಕ್ಕೆ" ಎಂದು ಶೆಟ್ಟರು ಬಿರುನುಡಿದರು.

"ಕರುಣೆಯಿಡಿ! ನಾಳೆ ಎರಡು ವರಹ ಒಪ್ಪಿಸುವೆನು"— ದೀನತೆಯಿಂದ ಸುಬ್ಬ ಅರುಹಿದ.

ಅದಾಗದು ಅಪ್ಪಣೆಯಾದಷ್ಟನ್ನು ತಪ್ಪದೆ ಒಪ್ಪಿಸಬೇಕೀಗ''.

ನಗದಿ ಇಲ್ಲವಾದರೆ-ನಗವಿದೆಯಲ್ಲ! ನಿನ್ನ ಕಿವಿ ಒಂಟೆ ತೆಗೆ. ಕೈಯ ಬಳೆ ಜಾರಿಸು. ಮಗಳ ಬೆಂಡೋಲೆ ತಪ್ಪಿಸು. ನಿಮಗೆ-ಬಿಲ್ಲವರಿಗೆ ಇಷ್ಟೊಂದು ಆಡಂಬರ! ಎಷ್ಟೊಂದು ಸೊಕ್ಕು!"

''ಸಲಿಗೆ ಕೊಟ್ಟರೆ ನಾಯಿ ನೊಸಲು ನೆಕ್ಕೀತು. ಹಿಡಿಯಿರಿ ಅವನನ್ನು! ಕಿತ್ತುಕೊಳ್ಳಿ ನಗವನ್ನು!''

ಸೇವಕರು ತಂದೆ ಮತ್ತು ಮಗಳ ಆಭರಣವನ್ನು ನಿಮಿಷಮಾತ್ರದಲ್ಲಿ ಅಪಹರಿಸಿಕೊಂಡರು! ಅವರನ್ನು ಬೀದಿಗೆ ದಬ್ಬಿಬಿಟ್ಟರು! ಹುಡುಗಿಯು ಪೆಟ್ಟಾಗಿ ಬೀದಿಯಲ್ಲಿ ಬಿತ್ತು. ಬಿದ್ದವಳನ್ನು ಇಬ್ಬರು ಬಾಲವೀರರು ಎತ್ತಿಕೊಂಡು ಹೋಗಿ ಮನೆಯಲ್ಲಿ ಬಿಟ್ಟುಬಂದರು. ಸುಬ್ಬನು ಎಲ್ಲವನ್ನೂ ಜೀರ್ಣಿಸಿಕೊಂಡ.

ಅಂದಿನಿಂದ ಶಾಲೆಗೆ ಹೋಗಬಾರದೆಂದು ತಂದೆಯ ಕಟ್ಟಪ್ಪಣೆ-ಮಗಳಿಗೆ ಆದರೂ, ಅವಳು ಮನೆಯಲ್ಲಿ ತಾನೇ ಓದುತ್ತಲೇ ಇದ್ದಳು. ಜೊತೆಗೆ ತುಸು ಸಂಗೀತವನ್ನೂ ಅಭ್ಯಾಸಿಸುತ್ತ ಬಂದಳು. ಅವಳೀಗ ವಿದ್ಯಾಬುದ್ಧಿಗಳಲ್ಲಿ ಚತುರೆ. ಗಾಯನದಲ್ಲಿ ಅತ್ಯಾತುರೆ. ಪ್ರಾಯದಲ್ಲಿ ಗಳ ತುಂಬಿದ ಹೆಂಗಸು.

ಸುಬ್ಬನು, ನೆರೆಹಳ್ಳಿಯ ಜಾರಪ್ಪನ ಮಗ ರಾಮುನಿಗೆ ತನ್ನ ಮಗಳು ಉಮ್ಮುವನ್ನು ಧಾರೆಯೆರೆದು ಕೊಟ್ಟ. ರಾಮುನು ಕರ್ರಗಿನವನಾದರೂ ಸುಂದರ. ಆದರೆ ವ್ಯಭಿಚಾರಿ. ಕುಡುಕನೂ ಆಗಿದ್ದ. ಮಾತ್ರ ಹಿರಿಯರು ಮಾಡಿಟ್ಟ ಆಸ್ತಿಬದುಕು ಸ್ವಲ್ಪ ಮಟ್ಟಿಗೆ ಇತ್ತು. ಇದನ್ನು ನೋಡಿಯೇ ಸುಬ್ಬ ತನ್ನ ಒಬ್ಬಳೇ ಮಗಳನ್ನು ಅವನಿಗೆ ಕೊಟ್ಟುದು. ಆದರೆ ಮದುವೆಯಾಗಿ ಒಂದು ವರ್ಷದೊಳಗೆ-ಒಂದೇ ವರ್ಷದೊಳಗೆ-ಇದ್ದುದು ಬದ್ದುದನ್ನೆಲ್ಲಾ ಕಳಕೊಂಡ. ಈ ವ್ಯಥೆಯೊಂದಿಗೆ ಸ್ತ್ರೀಸಂಬಂಧವಾದ ರೋಗವೂ ಹೆಚ್ಚಿ ಕಾಲವಾದನಾತ. ಮಗಳು ಬೇಡವೆಂದರೂ ಒತ್ತಾಯದಿಂದ ಕುಡುಕ ವ್ಯಭಿಚಾರಿಯ ಕೈಹಿಡಿಸಿದುದು ತಂದೆ; ಅದನ್ನು ಬಿಡಿಸಿದುದು ವಿಧಿ!

ವಿಧವೆ ಉಮ್ಮುವನ್ನು ಪುನಃ ಓರ್ವ ಧನವಂತ ಮುದುಕನ ಕೊರಳಿಗೆ ಕಟ್ಟಬೇಕೆಂದು ಹವಣಿಸಿದನು ಇವಳ ತಂದೆ. ಆದರೆ ಉಮ್ಮುವು ಮದುವೆಯ ಮುಂಚಿನ ರಾತ್ರಿ ಹೇಳದೆ ಕೇಳದೆ ಓಡಿಹೋದಳು.

ಉಮ್ಮುವು ಬೊಂಬಾಯಿಗೆ ತೆರಳಿದಳು. ಅಲ್ಲಿ ಓರ್ವ ಪ್ರಸಿದ್ಧ ಗಾಯಕಿಯ ಆಶ್ರಯ ಪಡೆದಳು. ಕೆಲವು ವರ್ಷಗಳಲ್ಲಿ ಇವಳು ಸಂಗೀತ ದಲ್ಲಿ ಪ್ರವೀಣೆಯಾದಳು. ಕಚೇರಿ ನಡೆಸತೊಡಗಿದಳು. ಇವಳ ಮೊದಲ ಗಾಯನ ಕಚೇರಿಯು ಜರಗಿದುದು ಮುಂಬಾಯಿಯ ಜಹಾಂಗೀರ್ ಹೋಲಿನಲ್ಲಿ. ಅಂದಿನ ಇವಳ ಉತ್ಸಾಹವು ಅತಿಯಾಗಿತ್ತು. ಜನರ ಪ್ರೋತ್ಸಾಹವು ಮಿತಿಮೀರಿತ್ತು. ಆಗ ಪತ್ರಿಕೆಗಳಲೆಲ್ಲಾ ಇವಳ ಸಂಗೀತ ಪ್ರೌಢಿಮೆಯ ಸುದ್ದಿಯೇ ಬಹಳ. ಬರೇ ಉಮ್ಮುವಲ್ಲ ಅವಳೀಗ– ಉಮಾಬಾಯಿ!

ಉಮಾಬಾಯಿಗೆ ಈಗ ೨೫ ವರ್ಷ ಪ್ರಾಯ. ಅವಳ ಸೌಂದರ್ಯ ಸೊಂಪು, ತುಟಿಕೆಂಪು, ಮೈಕಟ್ಟು ಚೊಕ್ಕ, ದೇಹ ಬಿಳುಪು, ಮುಖ ಹೊಳಪು, ದೃಷ್ಟಿ ಚಪಲ, ಮೂಗು ಮೊಗ್ಗು, ನಡು ಸಪುರ-ಇವು ಯೋಗಿ ಯನ್ನಾದರೂ ಭೋಗಾಭಿಲಾಷಿಯನ್ನಾಗಿ ಮಾಡುವಂತಿದ್ದವು ಈಗ ಅವಳ ಗುರುತು ಹಚ್ಚುವುದು ಸಾಗದ ಕಾರ್ಯ; ಆಗದ ಮಾತು. ಇಂತಹುದರಲ್ಲಿ ಪ್ರವಾಸಕ್ಕೆ ತೆರಳಿದ್ದ ನಮ್ಮ ನಿತ್ಯಾನಂದ ತೀರ್ಥರು ಇವಳ ಬಲೆಯೊಳಗೆ ಸಿಲುಕಿದುದು ಹೆಚ್ಚಲ್ಲ, ಮೆಚ್ಚು. ಇವರು ಸ್ವಭಾವತಃ ವಿಷಯಪ್ರೇಮಿ ಗಳು. ಮಾನವನು ಯೋಗಿಯಿರಲಿ, ಭೋಗಿಯಿರಲಿ; ಎಂದಿನ ವರೆಗೆ ತನ್ನ ಕಾಮವಾಸನೆಯನ್ನು ಬಚ್ಚಿಡಬಲ್ಲನು? ಮುಚ್ಚಿಡಬಲ್ಲನು? ಮೇಲಾಗಿ ನಿತ್ಯಾನಂದರು ಗಾಯನಪ್ರಿಯರು ಆದಕಾರಣ ಬೊಂಬಾಯಿಯಲ್ಲಿ ಇಳಿ ದಿದ್ದ ಇವರು ವೇಷಪಲ್ಲಟಿಸಿ, ಉಮಾಬಾಯಿಯ ಗಾಯನ ಕಚೇರಿಗೆ ತೆರಳಿದ್ದರು. ಇವರು ಪ್ರವಾಸ ಮುಗಿಸಿ, ಊರಿಗೆಬರುವಾಗ ಬಹು ಪ್ರಯಾ ಸದಿಂದ ಉಮಾಬಾಯಿಯನ್ನು ಜೊತೆಗೆ ಕಟ್ಟಿಕೊಂಡೇ ಬಂದರು.

ಉಮಾಬಾಯಿಯು ನಮ್ಮೂರಿಗೆ ಬರುತ್ತಲೇ ಅವಳು ಉಮಾದೇವಿ ಯಾಗಿ ರೂಪಾಂತರಹೊಂದಿದಳು. ಇಲ್ಲಿ ಅವಳ ಹಲವು ಕಚೇರಿಗಳು ಜರ ಗಿದುವು. ಒಂದು ದಿನ ಮುಕುಂದರಾಯರಲ್ಲಿ! ಇನ್ನೊಂದು ದಿನ ಗೋವ ರ್ಧನ ಶಾಸ್ತ್ರಿಗಳಲ್ಲಿ! ಮತ್ತೊಂದು ದಿನ 'ಮಾರುತ ಮಹಲಿ'ನಲ್ಲಿ! ಒಂದು ದಿನ ಊರ ದೇವಸ್ಥಾನದ ಪೌಳಿಯಲ್ಲಿ! ಎಲ್ಲದಕ್ಕೂ ಪ್ರೋತ್ಸಾಹ ಬಹಳ.

ಇಂದು ನಿತ್ಯಾನಂದ ತೀರ್ಥರ ಮಠದಲ್ಲಿ ಖಾಸಗಿ ಗಾಯನ ಕಚೇರಿ. ಇತರ ಕಡೆಗಳಂತೆ 'ಪಬ್ಲಿಕ್' (Public) ಅಲ್ಲವಿದು. ಆಮಂತ್ರಿತರಿಗೆ

ಮಾತ್ರ ಪ್ರವೇಶ. ಗಾಯನ ಮುಗಿದ ಮೇಲೆ ಉಚಿತ ಉಡುಗರೆಗಳು ಬಂದವು—ಗಾಯಕಿ ದೇವಿಗೆ! ಜರತಾರಿ ಸೀರೆ, ಕುಪ್ಪಸ, ಕಂಠಹಾರ ಇತ್ಯಾದಿ. ಆಗಂತುಕರು ಹಿಂತಿರುಗಿ ಹೋದ ಮೇಲೆ ಉಪಾಹಾರ ಸತ್ಕಾರವೂ ನಡೆಯಿತು. ಪರಸ್ಪರ ಸಮೀಪದಲ್ಲಿ ಕುಳಿತು ತಿಂಡಿ ತೀರ್ಥಗಳ ಸ್ವೀಕಾರವಾಯಿತು. ಅಂದಿನ ರಾತ್ರಿಯು ಸುಖವಾಗಿ ಕಳೆದುಹೋಯಿತು.

ಉಮಾದೇವಿಯು ಮುಂದಕ್ಕೆ ಪ್ರಯಾಣವನ್ನು ಬೆಳೆಸಲಿಲ್ಲ. ನಮ್ಮೂರಲ್ಲಿಯೇ ವಾಸಿಸಹತ್ತಿದಳು. ನಿಮ್ಮ ಮನ ಸೆಳೆವ ಬ್ರಹ್ಮಗಿರಿಯ ಆ ಸೌಧಾಗಾರವೇ ಅವಳ ವಸತಿ. ಅದನ್ನು ಕಟ್ಟಿಸಿಕೊಟ್ಟವರು ನಿತ್ಯಾನಂದರೆಂದು ಜನರ ಮಾತು. ಅದು ಸುಳ್ಳೆಂದು ನಾನು ನಂಬಲಾರೆ.

ಇಂದು ಉಮಾದೇವಿಯು ನಿತ್ಯವೂ ನಮ್ಮೂರ ಆದೇ ದೇವಸ್ಥಾನಕ್ಕೆ ಹೋಗುತ್ತಾಳೆ! ದೇವದರ್ಶನ ಮಾಡುತ್ತಾಳೆ! ಆದರೆ ತಡೆವವರಿಲ್ಲ; ಹಿಡಿದು ಹೊಡೆವವರಿಲ್ಲ! ನಿತ್ಯಾನಂದರೇ ಕೊಡುತ್ತಾರೆ—ಅವಳಿಗೆ ಗಂಧ ಪ್ರಸಾದ! ದೇವರ ದರ್ಶನಕ್ಕಿಂತಲೂ ಹೆಚ್ಚಿನ ಪ್ರಮೋದವು ದೇವೀದರ್ಶನದಲ್ಲಿ—ತೀರ್ಥರಿಗೆ. ಅವಳ ಚಪಲ ದೃಷ್ಟಿಯು ಇವರ ಅಚಲ ಮನಸ್ಸನ್ನಾದರೂ ಒಮ್ಮೊಮ್ಮೆ ಕುದುರಿಸಿಬಿಡುವುದುಂಟು. ಇಲ್ಲವಾದರೆ ಕೊಡೆನೆಂದು ಹೇಳಿದ ನಿತ್ಯಾನಂದರೆ "ಡಿಪ್ರೆಸ್ಡ್ ಕ್ಲಾಸ್ ಮಿಶ್ಯನಿ"ಗೆ ೫೦೦ ರೂಪಾಯಿಗಳನ್ನು 'ಠಣ್ ಠಣ್' ಎಂದು ಸುರುವುತ್ತಿದ್ದರೇ?

ಇಂತಿರಲು ದೇಶದಲ್ಲೆಲ್ಲಾ ಹರಿಜನ ದೇವಸ್ಥಾನ ಪ್ರವೇಶ ಚಳವಳ ವೆದ್ದಿತು. ಈ ಹೊಸ ಭೂತವು ನಮ್ಮೂರಿಗೂ ಕಾಲು ಚಾಚಿತು. ನಮ್ಮೂರಲ್ಲಿ ಪ್ರಬಲ ಜನಜಾಗೃತಿಯೊಂದಿಗೆ ದೇವಸ್ಥಾನ ಪ್ರವೇಶ ಸತ್ಯಾಗ್ರಹವೂ ಆರಂಭವಾಗಿಯೆ ಹೋಯಿತು. ಇದರಿಂದ ಕಳವಳಗೊಂಡವರು ಚಳವಳಗಾರರನ್ನು ಸೆದೆಬಡಿಯಲು ಎದುರೊಡ್ಡಿದ ಕೃತ್ರಿಮೋಪಾಯಗಳು ಸೂರ್ಯನಿದಿರ ಮಂಜಿನಂತೆ ಕರಿಗಿ ನೀರಾದುವು. ಚಳವಳವು ನೋಡ ನೋಡುತ್ತ ಪ್ರಬಲವಾಗಿ ಬಿಟ್ಟಿತು. ನಿತ್ಯಾನಂದರೂ ಅವರ ಅನುಯಾಯಿಗಳಲ್ಲಿ ಕೆಲವರೂ ತಬ್ಬಿಬ್ಬಾಗಿ ಹೋದರು.

ರಾತ್ರಿಕಾಲ! ಮಠದ ಮಾಳಿಗೆಯ ಅಂತರಂಗ ಕೊಠಡಿಯಲ್ಲಿ ಮಂತ್ರಾಲೋಚನೆ ನಡೆಯುತ್ತಿದೆ. 'ದೇವೀತೀರ್ಥ'ರೆ ಚರ್ಚಕರು.

"ಅದೆಲ್ಲಾ ಇರಲಿ. ನೀವು ಇಷ್ಟೊಂದು ಗಲಿಬಿಲಿಯಾಗುವುದೇಕೆ? ವಿಚಾರಪರರಾಗಿರಿ. ದೇವರಿಗೆ ಸ್ಪೃಶ್ಯಾಸ್ಪೃಶ್ಯ ಭೇದವಿದೆಯೋ? ಅವನಿಗೆ ಎಲ್ಲರೂ ಸರಿಸಮಾನ ಎಲ್ಲರಲ್ಲೂ ಅವನ ಅಂಶವಿದೆ".

"ಆದರೆ ಹಿಂದಿನ ರೂಢಿ ಕವಚವನ್ನು ಒಮ್ಮೆಯೇ ಕಳಚಿಬಿಡುವುದೆಂತು?"

"ಅನೈಸರ್ಗಿಕವಾದುದನ್ನು ಎಂದಾದರೂ ಬಿಡಲೇಬೇಕು. ಇಲ್ಲವಾದರೆ ಅದು ತಾನಾಗಿ ಅಳಿಯುವುದು. ಉಳಿಸಬೇಕಾದರೆ ಬೆಳೆಸುವುದೊಂದೇ ಯುಕ್ತಿ. ಹಿಂದಿನ ರೂಢಿಗಿಂತಲೂ ಇಂದಿನ ಕಾಲಸ್ಥಿತಿಗೆ ಅವಶ್ಯಕವಾದ ಪ್ರಾಜ್ಞ ಬಹುಜನ ಸಮ್ಮತವಾದ ಆಚಾರ ಪದ್ಧತಿಗಳೇ ಮಿಗಿಲು".

"ಆದರೂ ಪೂರ್ವಾಚಾರವನ್ನು ಹೇಗೆ ಬಿಡಲಾದೀತು?"

"ನಿಮ್ಮ ಮೇಲಿದ್ದ ನಿಸರ್ಗ ವಿರುದ್ಧವಾದ ಸಮಾಜ ಕಟ್ಟೊಂದನ್ನು ಮುರಿದು ಸುಧಾರಕರಾಗಿರುವ ನೀವು ಈ ದೇಶಕಾರ್ಯಕ್ಕಾಗಿ ಚಡಪಡಿಸುವ ಅಗತ್ಯವಿಲ್ಲ. ಉಚ್ಚ ವರ್ಣೀಯರೆನಿಸಿ ತುಚ್ಛಕಾರ್ಯವೆಸಗುವ ಚಂಡಾಲರು ದೇವಸ್ಥಾನ ಪ್ರವೇಶಿಸುವುದಿಲ್ಲವೇ?

"ಆದರೆ ಅವರು ಜಾತಿಯಲ್ಲಿ ಮೇಲು".

"ಜಾತಿಗಿಂತಲೂ ನೀತಿಯು ಶ್ರೇಷ್ಠ. ಅಸ್ಪೃಶ್ಯರು ಜಾತಿಗೆಟ್ಟು ಪರಜಾತಿಗೆ ಸೇರಿ ಕ್ರೈಸ್ತ, ಮುಹಮ್ಮದೀಯ ಮತಾವಲಂಬಿಗಳಾದರೆ ನಾವವರನ್ನು ಮುಟ್ಟುವುದಿಲ್ಲವೇ?"

ಮುಟ್ಟುವುದುಂಟು".

"ನೀವೇ ಈಗ ಅಸ್ಪೃಶ್ಯಳೆನಿಸುವವಳೊಡನೆ ಭೋಗತೃಷ್ಣೆಯನ್ನು ನೀಗಿಸಿಕೊಳ್ಳುವುದಿಲ್ಲವೇ?"

"ಯಾರವಳು"?

"ನಾನೇ ಅವಳು. ೧೨ ವರ್ಷಗಳ ಹಿಂದೆ ದೇವಸ್ಥಾನ ಪ್ರವೇಶಿಸಿ ದಂಡನೆಗೊಳಗಾಗಿದ್ದ ಆ ನೀಚ ಉಮ್ಮುಮ್ಮೇ ನಾನು. ಈಗೇನೆನ್ನುವಿರಿ?"

ನಿತ್ಯಾನಂದರು ನೀರವ.

---

## ೪ ನಿರ್ಭಾಗ್ಯೆ ಲಕ್ಷ್ಮಿ

ನಮ್ಮದು ಗುಡ್ಡದ ಕೆಳಗಣ ಹಳ್ಳಿ. ಪೂರ್ವದಿಂದ ಪಶ್ಚಿಮಕ್ಕೆ ಇಳಿಜಾರು. ಮರಗಳಿಂದ ಮುಚ್ಚಿದ ಗದ್ದೆಗಳು. ನಿಸ್ಸಾರವಾದ ಭೂಮಿ. ಜನರು ಬಡವರು. ಗೇಣಿ ಒಕ್ಕಲುಗಳೇ ಹೆಚ್ಚು. ಹೊಟ್ಟೆ ತುಂಬ ಉಣ್ಣುವವರು ಕಡಿಮೆ. ಗಟ್ಟಕ್ಕೆ ಹೋಗುವ ಗಂಡಸರೇ ಜಾಸ್ತಿ. ಹೆಂಗುಸರ ಮೈಮೇಲೆ ವಸ್ತ್ರ ಒಡವೆಗಳ ಆಡಂಬರವೇನೂ ಇಲ್ಲ. ಶಾಲೆಯ ಬಾಗಿಲ ತನಕ ಮುಟ್ಟಿದ ಮಕ್ಕಳು ಅಪರೂಪ ಜನರು ವಸ್ತ್ರ ಒಡವೆಗಳಿಗಾಗಿ ಇರುವುದಾದರೆ ಹೊಟ್ಟೆಗಾಗಿ ಬಾಳುವವರು ನಾವು.

ನಮ್ಮ ಧನಿಗಳು ಶ್ಯಾಮ ಭಟ್ಟರು. ಕಿರಿಗಚ್ಚೆಯವರು ಅವರು. ಹಿರಿಗಚ್ಚೆಯವರನ್ನು ಕಂಡರೆ ಅವರಿಗಾಗದು. ಹರಕು ಕೌಪೀನಧಾರಿಗಳನ್ನು ಕಂಡರೆ ನಾಲ್ಕು ಮೆತ್ತಗಿನ ಮಾತುಗಳನ್ನು ಆಡುವರು. ಅವರಿಗೆ ತಕ್ಕ ಒಕ್ಕಲು ನಾವು. ನಾವು ಬಡವರೆನ್ನುವುದಕ್ಕಿಂತ, ಗರೀಬರೆನ್ನುವುದೇ ಚಲೋದು. ಮೂರು ಮಳೆಗಾಲಗಳು ಕಾಣದ ವರುಷಗಳೇ ನಮಗೆ ಬಾರವು. ನಮ್ಮ ಸರ್ವಸ್ವವೆಂದರೆ, ಹಟ್ಟಿಯಲ್ಲಿಯ ಮುದಿ ಎತ್ತುಗಳೆರಡು, ಮನೆಯೊಳಗಿನ ಸೋರುವ ಕೊಡವೊಂದು, ತುಳಸಿಗೆ ನೀರು ಹೊಯ್ಯುವ ಅಜ್ಜನ ಕಾಲದ ಹಳೆಯ ತಂಬಿಗೆಯೊಂದು. ಒಂದನ್ನು ಮರೆತೆ. ಅಕ್ಕನು ಕ್ರಯಕ್ಕೆ ತಂದ ಅಕ್ಕರೆಯ ಕರುವೊಂದು. ಉಳಿದುದೇನೆಂದು ಕೇಳಬೇಡಿ. ನಾಚುಗೆಯು ಆಗುವುದು; ಗುಟ್ಟು ಹೊರ ಬೀಳುವುದು.

ನಮ್ಮಲ್ಲಿ ಹೆಣ್ಣು ಸಂತಾನ ಬಹಳ. ಐದು ಜನ ಹೆಣ್ಣುಗಳ ಮಧ್ಯೆ ತಪ್ಪಿ ನಾನೊಬ್ಬ ಗಂಡುಸಾದೆ. ಲಕ್ಷ್ಮಿಯು ನಮ್ಮಲ್ಲಿ ಕೊನೆಯವಳು. ಹುಟ್ಟಿ ಮೂರೇ ತಿಂಗಳಲ್ಲಿ ಅಪ್ಪನನ್ನು ಕಳಕೊಂಡಳು ಅವಳು. ಅಪ್ಪನನ್ನು ಕಳಕೊಂಡ ಹುಡುಗಿಯೆಂದು ಅಮ್ಮನಿಗೆ ಅವಳನ್ನು ಕಂಡರಾಗದು. ಅದರಲ್ಲಿ ಅವಳದೇನು ತಪ್ಪೋ ನನಗೆ ತಿಳಿಯದು. ಅವಳಾ ಚಂದವಾದ ಮುಖ, ಬಿಳಿ ಮೈ, ಹೊಳಪಿನ ಕಣ್ಣು, ಗಂಟು ಕಟ್ಟಿದ ಹುಬ್ಬು, ಮೊಗ್ಗಾದ ಮೂಗು, ಗುಂಗುರಾದ ಕೂದಲು, ಕೆಂಪಗಿನ ತುಟಿ, ಉರುಟುರುಟಾದ ಅಂಗಗಳು ಎಂಥವರ ಮನಸ್ಸನ್ನೂ ಸೆಳೆಯುವಂತಿದ್ದಿತು. ಆದ್ದರಿಂದ ಅವಳ ಮೇಲೆ ಪ್ರೀತಿ ಹೆಚ್ಚು ನನಗೆ. ಅವಳು ನಡೆನುಡಿಗಳಲ್ಲಿ

ಜಾಣೆ ಗುಣದಲ್ಲಿ ಹಿರಿಯಳು. ಓರಗೆಯ ಹುಡುಗಿಯರಿಗೆ ಬೇಕಾದವಳು. ಊರಿನ ಸ್ತ್ರೀಯರಿಗೆ ಮುದ್ದು. ಆದರೂ ಅಮ್ಮನಿಗೆ ಸಿಟ್ಟು.

ಏನೇ ಆಗಲಿ, ಲಕ್ಷ್ಮಿಯನ್ನು ಗಂಜಿ ಇದ್ದ ಮನೆಗೆ ಕೊಡಬೇಕೆಂದು ನನ್ನ ಮನಸ್ಸು. ಆದಕ್ಕಾಗಿ ಹಲವೆಡೆ ಹುಂಡಿ ಹಾಕಿದೆ; ಬಹಳ ಕಡೆ ತಿರುಗಾಡಿದೆ; ಬಹಳ ಬಹಳ ಪ್ರಯತ್ನಮಾಡಿದೆ. ಎಲ್ಲಿ ಹೋದರೂ ವರದಕ್ಷಿಣೆಯ ಭೂತವೊಂದು ನನಗೆ ಅಡ್ಡಗಾಲು ಹಾಕುತ್ತಿತ್ತು. ಅದಕ್ಕೆ ಕುಲ, ಶೀಲ, ಶಿಕ್ಷಣ, ಗುಣವೊಂದೂ ಬೇಡ. ಲಿಂಗಭೇದವೊಂದಿದ್ದರಾಯಿತು. 'ಪುಲ್ಲಿಂಗ'ವೆಂಬ ಒಂದೇ ಹಕ್ಕು, ಸರ್ವ ಹಕ್ಕುಗಳಿಗೂ ಬಾಧ್ಯಸ್ಥನು. ಇದೊಂದು ಸಮಾಜದ ತಿರುಳನ್ನು ತಿನ್ನುವ ಕೀಟ. ಹೆಣ್ಣು ಹೆತ್ತ ತಾಯಿತಂದೆಗಳ ಕುತ್ತಿಗೆಯ ಗುದಿಗೆ. ಕೊನೆಗೆ ನನ್ನ ಸರ್ವಪ್ರಯತ್ನಗಳೂ ನೀರ ಮೇಲಣ ಹೋಮವಾಗಿ ಕೈಯ್ಯಾರಿ ಕುಳಿತೆ.

ಅಷ್ಟರಲ್ಲಿ, ನಮ್ಮ ಗ್ರಹಚಾರವು ದಾರಿಬಿಟ್ಟಿತೋ, ಅಥವಾ ಲಕ್ಷ್ಮಿಯ ಭಾಗ್ಯವು ಬಾಗಿಲು ತೆರೆಯಿತೋ ಗೊತ್ತಿಲ್ಲ. ನಮ್ಮ ತಂದೆಯ ವರ ಮನೆಯಲ್ಲಿ ದಾರೆಯ ಲಗ್ನವೆಂದು ವದಂತಿಯಾಯಿತು ನಾನು ಉಬ್ಬಿದೆ. ಅಮ್ಮನ ಮುಖವೂ ಅರಳಿ ಹೂವಾಯಿತು. ನಮ್ಮಪ್ಪ ಗತಿಸಿದ್ದರೂ ಚಿಗಪ್ಪನಿಗೆ ನಮ್ಮ ಮೇಲೆ ಪ್ರೀತಿ ಹೆಚ್ಚು. ಸಾಯುವಾಗ ಚಿಗಪ್ಪನೊಡನೆ, ಚಿಕ್ಕ ಕೂಸಾದ ಲಕ್ಷ್ಮಿಯನ್ನು ತೋರಿಸಿ, "ಬಿಟ್ಟು ಹಾಕಬೇಡ; ಗತಿ ಇಲ್ಲ" ಅಂದಿದ್ದರು ಅಪ್ಪ. ಅಂದಿನಿಂದ ಆಗಾಗ ಬಟ್ಟೆಯೋ ಹಣವೋ ಕೊಟ್ಟು ಸಹಾಯ ಮಾಡುತ್ತಿದ್ದರು ಚಿಗಪ್ಪ. ಈ ಸಲ ಕೈಕೊಟ್ಟಾರೆಂದು ಊಹಿಸಿದೆವು. ಒಡನೆಯೇ ಚಿಗಪ್ಪನನ್ನು ಕಂಡು ಮಾತನಾಡಿದೆ. "ಮನೆಯವರೊಡನೆ ಕೇಳಿ ಹೇಳುತ್ತೇನೆ. ನಾಡದು ಬಾ"–ಅಂದರು....ಅಮ್ಮನು ಇದನ್ನು ಕೇಳಿ "ದೇವರೇ ಗತಿ" ಎಂದು ನಿಟ್ಟುಸಿರು ಬಿಟ್ಟರು.

ನಾಗಿಮಾಮಿ ನಮ್ಮಪ್ಪನ ದೂರದ ಕವರಿನವಳು. ಆವರ ಮನೆಗೆ ನಮ್ಮಲ್ಲಿಂದ ಮೂರುವರೆ ಮೈಲುದೂರ. ಅವಳಿಗೆ ಮೂರು ಮಂದಿ ಗಂಡು ಮಕ್ಕಳೇ. ಹಿರಿಯವನು ಗೋವಿಂದ; ಕುಷ್ಠರೋಗಿ. ಕಿರಿಯವನು ಕಿಟ್ಟು; ಮರದಿಂದ ಬಿದ್ದು ಕಾಲು ಮುರಿದುಕೊಂಡಿದ್ದ. ಮಧ್ಯದವನು ವಿಟ್ಟು; ಕಪ್ಪಾದರೂ ಊನವಿಲ್ಲ. ಅವರ ತಂದೆ ಕಾಲವಾಗುವ

ಮೊದಲೇ ಹತ್ತು ಕೊಯ್ಲು ಗದ್ದೆ, ಹತ್ತು ಸೆಂಟ್ಸ್ ತೋಟ ಮತ್ತು ಮನೆ ಇಷ್ಟನ್ನು ಮೂಲಗೇಣಿಗೆ ಮಾಡಿಕೊಟ್ಟಿದ್ದರು. ಹೊಳೆಯ ದಡದ ಮೇಲೆ ಅವರ ಮನೆ. ನೀರೆಳೆದು ಸುಗ್ಗಿ ಕೊಳಕೆ ಮಾಡಿದರೆ ಊಟಕ್ಕೆ ತೊಂದರೆ ಆಗುತ್ತಿದ್ದಿಲ್ಲ. ನನ್ನ ಕಣ್ಣು ವಿಟ್ಟುವಿನ ಮೇಲೆ ಬಿತ್ತು. ಚಿಗಪ್ಪನನ್ನು ಕರೆದುಕೊಂಡು ಹೋಗಿ ಮಾತನಾಡಿಸಿದೆ. "ಗೋವಿಂದ ನನ್ನು ಬಿಟ್ಟು ವಿಟ್ಟುವಿಗೆ ಲಗ್ನ ಮಾಡುವುದಿಲ್ಲ" ಎಂದರು ನಾಗಿಮಾಮಿ. "ಆಗುವುದಾದರೆ ಆಗಲಿ. ನನ್ನ ತೊಂದರೆ ಬೇಡ" ಅಂದ ಗೋವಿಂದ. "ತಾಯಿ ಮುಟ್ಟಾದಾಗ ಅಡಿಗೆ ಮಾಡಿ ಮಾಡಿ ಸೋತೆ. ಏಕಾಗ ಬಾರದು?" ಎಂದು ಕಿಟ್ಟು ಸ್ವರವೆತ್ತಿದ "ಹಾಗಾದರೆ ನನಗೇನು? ಮಾಡಿ. ಅವನಿಗೆ ಹಲವು ಕಡೆಯವರು ಮೇಲಾಟ ಮಾಡಿ ಬಂದಿದ್ದರು; ನಾವೇ ಹಿಂದಕ್ಕೆಳೆದುದು" ಎಂದು ನಾಗಿಮಾಮಿ ಒಯ್ಯಾರದಿಂದ ಆಡಿದರು. "ಬದಿ ಹೇಳಿ" ಅಂದರು ಚಿಗಪ್ಪ. "ಇನ್ನೂರು" ಅಂದರು ಮಾಮಿ. "ಗಡಗಡ" ಅಂದಿತು ನನಗೆ. "ಅದಿರಲಿ; ಖಂಡಿತ ಹೇಳಿ. ನಮ್ಮೊಳಗೇ ಅಲ್ಲವೋ" ಎಂದು ಚಿಗಪ್ಪ ನಗುತ್ತ ಹೇಳಿದರು. "ನೂರೈವತ್ತರ ಕಡಿಮೆ ಸಾಧ್ಯವೇ ಇಲ್ಲ" ಎಂದು ಮಾಮಿ ನಿರ್ಧಾರವಾಗಿ ನುಡಿದರು. ಕೊನೆಗೆ ಚಿಗಪ್ಪನವರು ಒಳಗೆ ಹೋಗಿ ಏನೋ ಮಂತ್ರಿಸಿ ಎಪ್ಪತ್ತೈದಕ್ಕೆ ಒಪ್ಪಿಸಿದರು.

ಮದುವೆಯು ಸಮೀಪಿಸಿತು. ವ್ಯಥೆಯು ಹೆಚ್ಚಿತು. ಬಾಯಿಗೆ ಹಾಕಲು ಅಕ್ಕಿಕಾಳಿಲ್ಲ ನಮ್ಮಲ್ಲಿ. ಅಡವು ಒತ್ತೆ ಮಾಡಿ ಆದರೂ ಹಣ ತರೋಣವೆಂದರೆ, ನಗನಾಣ್ಯವಿಲ್ಲ. ಕಡ ಕೇಳಲು ಹೋದರೆ, ಹೋದಲ್ಲಿ ಬಾಗಿಲು ಬಂದಾಗುವುದು. ಕೊನೆಗೆ ಸುಬ್ಬಾ ಭಟ್ಟರ ಮಗ ನಾರಾಯಣ ಭಟ್ಟರನ್ನು ಹಿಡಿದೆ. ಅವರಿಗೂ ನನಗೂ ಚಿಕ್ಕಂದಿನಿಂದ ಸ್ನೇಹ. ನನ್ನ ಕರಕರೆಯನ್ನು ಸಹಿಸಲಾರದೆ ಇಪ್ಪತ್ತು ರೂಪಾಯಿಗಳನ್ನು ನೋಟಿನ ಮೇಲೆ ಸಾಲ ಕೊಟ್ಟರು ನನ್ನ ಮೂವರು ಬಾವಂದಿರು ರೂಪಾಯಿ ಹತ್ತು ಹತ್ತರಂತೆ ಸಹಾಯ ಮಾಡುವುದಾಗಿ ಒಪ್ಪಿದರು. ದೇವರು ಮರ್ಯಾದೆ ಉಳಿಸಿದ. ಮದುವೆಯ ದಿವಸ ಹತ್ತು ರೂಪಾಯಿ ಹುಡುಗಿಯ ಕೈಯಲ್ಲಿ ಬಂತು. ಅಂತೂ ಅರುವತ್ತು ರೂಪಾಯಿಗಳನ್ನು ಗಂಟುಮಾಡಿ. ಅಮ್ಮ ಅಳಿಯನಿಗೆ ಉಡುಗೊರೆ

ಮಾಡಿದಳು. ವರನ ಕಡೆಯವರು ಲೆಕ್ಕಮಾಡಿ, ಜಗಳಕ್ಕಾರಂಭ ಮಾಡಿದರು. ಕಡೆಗೆ ಚಿಗಪ್ಪನವರು ಮಧ್ಯ ಬಿದ್ದು, ಹುಡುಗನನ್ನು ಮನೆಗೆ ಕರೆದು ಉಳಿದ ಹಣವನ್ನು ಕೊಡುವುದೆಂದಾಯಿತು.

ಮರುವರುಷ ಲಕ್ಷ್ಮಿ ಹೆಂಗುಸಾದಳು. ತಿಂಗಳಾಯಿತು. ವರುಷವಾಯಿತು. ಎರಡು ವರುಷವಾಯಿತು. ಆದರೂ ಗಂಡನ ಮನೆಯುವರ ಸುದ್ದಿಯೇ ಇಲ್ಲ. ನಾನು ಹೋಗಿ ವಿಚಾರಿಸಿದೆ. ಹಣ ಕೊಡದೆ ಸಾಧ್ಯವಿಲ್ಲವೆಂದಾಯಿತು. ಮನೆಗೆ ಬಂದು ಕಾಡಿದೆ ಅಕ್ಕನನ್ನು. ಅಕ್ಕನ ಕರು ದನವಾಗಿ ಆಗ ತಾನೇ ಕರು ಹಾಕಿತ್ತು. ನನ್ನ ಮಾತನ್ನು ಮೀರುವುದಕ್ಕಾಗದೆ ಅದನ್ನು ಮಾರಿ ಹದಿನೈದು ರೂಪಾಯಿ ಕೊಟ್ಟಳು ಅವಳು.

ಲಕ್ಷ್ಮಿಯು ಹೆಂಗುಸಾಗಿ ಹೋದ ಮೇಲೆ ನಾಲ್ಕು ತಿಂಗಳ ದಿವಸವನ್ನು ಸುಖವಾಗಿ ದೂಡಿದಳು. ಮತ್ತೆ ಬಾಳುವೆಯು ಬಿಸಿಯಾಗ ತೊಡಗಿತು. ಮಾಡಿದ ಕೆಲಸದಲ್ಲಿ ದೋಷವನ್ನು ಹೆಕ್ಕತೊಡಗಿದರು ನಾಗಿಮಾಮಿ. ನಿಂತಲ್ಲಿ ಕೂತಲ್ಲಿ ತಪ್ಪು ತೋರಿಸಿಕೊಟ್ಟನು ಕಿಟ್ಟು. ನೆರೆಕರೆಯವರು ಲಕ್ಷ್ಮಿಯ ದೂರು ಕೇಳಿಕೇಳಿ ಸೋತರು. “ಜಿಣ್ಣೆಯಂಥಾ ಮಗುವನ್ನು ಬೆಂಕಿಯಂಥಾ ಜನರಿಗೆ ಏಕೆ ಕೊಟ್ಟರಪ್ಪಾ! ಹೆಚ್ಚಾಗಿದ್ದರೆ ಕಲ್ಲುಕಟ್ಟಿ ಹೊಳೆಗಾದರೂ ಬಿಸಾಡಬಾರದಿತ್ತೇ? ಈ ಕಷ್ಟ ಬೇಡ. ಪಾಪ!” ಅನ್ನ ತೊಡಗಿದರು ಜನರು. ಲಕ್ಷ್ಮಿಯ ಹೊಟ್ಟೆ ದೊಡ್ಡದೆಂದಾಯಿತು. ಮನೆ ಹಾಳಾಯಿತೆಂದಾಯಿತು. ಕೈ ಹಿಡಿದ ಮೇಲೆ ವಿಟ್ಠೊ ಕೆಟ್ಟನೆಂದಾಯಿತು. ಇಟ್ಟುಕೊಂಡರೆ ಮಳೆ ಬಾರದೆಂದಾಯಿತು. ಲಕ್ಷ್ಮಿ ಎಲ್ಲವನ್ನೂ ಕೇಳಿ ಜೀರ್ಣಿಸಿದಳು. ಕರೆದು ತರುವುದಕ್ಕೆ ನಾನು ಹೋದೆ. ನನ್ನೆದುರಿಗೇ ಪ್ರತ್ಯಕ್ಷವಾಗಿ ಅವಳಿಗೂ, ಅಪ್ರತ್ಯಕ್ಷವಾಗಿ ಅವಳ ಕುಟುಂಬವಾದ ನಮಗೂ ನಾಗಿಮಾಮಿಯ ಪೂಜೆಯಾಯಿತು.

ಕೆಲವು ದಿವಸ ನಮ್ಮಲ್ಲಿದ್ದ ಮೇಲೆ ಹಿಂದಿನದೆಲ್ಲವೂ ಮರೆತು ಹೋಯಿತು ನಮ್ಮ ಲಕ್ಷ್ಮಿಗೆ. ತಿರುಗಿ ಗಂಡನ ಮನೆಗೆ ಕರೆದುಕೊಂಡು ಹೋಗಿ ಬಿಡಬೇಕೆಂದಳು ನನ್ನೊಡನೆ. “ಬೇಡ, ಕರೆಯಲಿಕ್ಕೆ ಬಂದರೆ ಹೋಗು. ನೀನಾಗಿ ಹೋಗಿ ಮೂಗು ಕೊಯ್ಸುಕೊಳ್ಳುವ ಅಗತ್ಯವಿಲ್ಲ. ನಮಗೆ ನೀನೊಬ್ಬಳು ಹೆಚ್ಚಾಗುವುದಿಲ್ಲ” ಎಂದು ನಾನು

ಹೇಳಿದೆ "ಅವರು ಇಲ್ಲಿಯೇ ಬಿಡುತ್ತಾರೋ ಏನೋ! ನನಗಾಗಿ ಮನೆ ಕಳೆದುಕೊಂಡಿರಿ. ಇನ್ನು ಮರ್ಯಾದೆಯನ್ನೂ ಕಳೆದುಕೊಳ್ಳುವುದು ಬೇಡ ನನಗೇನು ಮಕ್ಕಳು ಮರಿ ಇಲ್ಲ. ಒಂದು ಜೀವ. ಹಣೆಯಲ್ಲಿ ಬರೆದುದನ್ನು. ಅನುಭವಿಸಿ ತೀರಿಸುತ್ತೇನೆ" ಎಂದಳು. ಲಕ್ಷ್ಮಿಯು ನಾನಿಲ್ಲದಾಗ ಹೊಲತಿ ಅಕ್ಕುವನ್ನು ಕರೆದುಕೊಂಡು ಗಂಡನ ಮನೆಗೆ ನಡೆದಳು.

ನಾಗಿಮಾವಿ ನೋಯಿಸಿದ ಸರ್ಪದಂತೆ ಬುಸುಗುಟ್ಟತೊಡಗಿದರು. ಕಿಟ್ಟು ಅನ್ನ ಹಾಕುವುದೇ ಬೇಡವೆಂದ. ಲಕ್ಷ್ಮಿಯ ದುಃಖವು ಕರಗಿ ಕಣ್ಣೀರಾಗಿ ಹರಿಯ ತೊಡಗಿತು. ಲಕ್ಷ್ಮಿಗೆ ದಿನ ದಿನಕ್ಕೆ ವಿಲಕ್ಷಣವಾದ ಸಂಕಷ್ಟಗಳು ಬರತೊಡಗಿದುವು. ಪುಣ್ಯಕ್ಕೆ ಊರವರು ಲಕ್ಷ್ಮಿಯೊಡನೆ ಸಹಕರಿಸತೊಡಗಿದರು. ಕೆಲವರು ಅನ್ನಪಾನಗಳನ್ನು ಗುಟ್ಟಿನಿಂದ ಕೊಡತೊಡಗಿದರು. ಕೆಲವರು ಅವಳನ್ನು ಶ್ಲಾಘಿಸತೊಡಗಿದರು. ಇದರಿಂದ ನಾಗಿಮಾವಿಯ ಕೋಪಾಗ್ನಿಗೆ ತುಪ್ಪ ಹೊಯ್ದಂತಾಯಿತು. ಲಕ್ಷ್ಮಿಯು ಸಿಕ್ಕಿದವರೊಡನೆ ಮಾತಾಡುತ್ತಾಳೆ. 'ಜಾರಿಣಿ' ಎಂಬ ಹೊಸ ನಾಮಕರಣವಾಯಿತು. ಸಿಕ್ಕಿದ್ದನ್ನು ಕಳವುಮಾಡಿ ಸಿಕ್ಕಿಸಿಕ್ಕಿದವರಿಗೆ ಕೊಡುತ್ತಾಳೆ. 'ಮಾರಿ' ಎಂದಾಯಿತು. ಏನಂದರೂ ಲಕ್ಷ್ಮಿಯು ನೀರವ. ಒಂದು ದಿವಸ ಏನೋ ಗುಣುಗುಟ್ಟಿದಕ್ಕೆ ಕಿಟ್ಟು ಹಿಡಿಸೂಡಿ ಹಿಡಿದು ಓಡಿಸಿ ಬಂದನಂತೆ. "ಬೈಗಳ" ಪಾರಾಯಣವನ್ನೂ ಮಾಡಿದನಂತೆ. ಲಕ್ಷ್ಮಿಯು ಅದನ್ನೂ ನುಂಗಿ ಆ ದಿನ ಇಡೀ ಅತ್ತಳಂತೆ. ಆದರೆ ಕೇಳುವವರಾರು? ಹೆಂಗುಸಾಗಿ ಹುಟ್ಟಿದ್ದಕ್ಕೆ ಪಾಲಿಗೆ ಬಂದದನ್ನು ಅನುಭವಿಸಿಯೇ ತೀರಬೇಕಷ್ಟೆ!

ನಾಲ್ಕು ದಿವಸದ ಮಾತಿಗೆ ನಮ್ಮಲ್ಲಿಗೆ ಕರೆದುತಂದೆ ಲಕ್ಷ್ಮಿಯ ಮೊಗದಲ್ಲಿ ಹಿಂದಿನ ನಗುವಿಲ್ಲ; ದೇಹದಲ್ಲಿ ಕಾಂತಿ ಇಲ್ಲ. ಕಡ್ಡಿಯಂತೆ ಕಂಗಾಲಾಗಿರುವಳು. ನಮ್ಮೂರ ಮಂದಿ "ಅಯ್ಯೋ! ಲಕ್ಷ್ಮಿ ಏಕೆ ಹೀಗಾದಳಪ್ಪಾ!" ಎಂದರೆ "ಅಲ್ಲಿ ನಾನೊಬ್ಬಳೇ. ಕೆಲಸ ಹೆಚ್ಚು" ಎಂದು ನಗುತ್ತ ಹೇಳುವಳು. ಯಾರೊಡನೆಯೂ ಮಾತಾಡದೆ ಮೌನವಾಗಿ ದಿನ ದೂಡುವಳು. ಅಷ್ಟರಲ್ಲಿ, ಕಿಟ್ಟು ಕೊಲೇರಾದಿಂದ ತೀರಿಹೋದ. ಆವನ ಶುದ್ಧಕ್ಕಾಗಿ ಕರೆದುಕೊಂಡು ಹೋಗಲು ಪಿಟ್ಟು ಬಂದ.

ಗೋವಿಂದ ಬಾವ ಮಾತ್ರ ಲಕ್ಷ್ಮಿಯ ವಿಷಯ ಯಾವ ಮಾತನ್ನೂ

ಆಡಿದ್ದಿಲ್ಲ. ಒಮ್ಮೆ ವಿಟ್ಟು ಎಳ್ಳಮಾವಾಸ್ಯೆಗೆ ತೀರ್ಥಹಳ್ಳಿಗೆ ಹೋದ. ಆಗ ನಡೆದ ಸಂಗತಿಯನ್ನು ಹೇಳಿದರೆ ನಂಬಲಾರಿರಿ. ಆದರೂ ಹಿಡಿದ ಕೈಯಲ್ಲಿ ಒಂದಿಷ್ಟು ಬರೆದು ಬಿಡುತ್ತೇನೆ. ಲಕ್ಷ್ಮಿ ಒಬ್ಬಳೇ ಇದ್ದಾಗ ಗೋವಿಂದ ಪ್ರೇಮವನ್ನು ಬೀರತೊಡಗಿದ. ಲಕ್ಷ್ಮಿಯು ಬೇಡನ ಬಲೆಗೆ ಹೆದರಿದ ಚಿಗರಿಯಂತೆ ಸರಸರನೆ ಸರಿದುಬಿಟ್ಟಳು. ಮಧ್ಯ ರಾತ್ರಿಯಾಗ ಬಹುದು. ಲಕ್ಷ್ಮಿಯು ಎಚ್ಚರವಾಗಿಯೇ ಇದ್ದಳು. ಗೋವಿಂದನು ಕಳ್ಳಹೆಜ್ಜೆಯಿಂದ ಪುನಃ ಬಂದ. ಆಗ ಲಕ್ಷ್ಮಿಯು ಮತ್ತೊಂದು ಬಾಗಿಲಿನಿಂದ ಮೆಲ್ಲನೆ ಜಾರಿ, ಹತ್ತಿರದ ಊರ ಭೂತದ ಗುಡಿಯಲ್ಲಿ ಅವಿತು ಅಂಜುತ್ತ ಅಳುಕುತ್ತ ರಾತ್ರಿ ಜಾಗರಣ ಮಾಡಿದಳು.

ವಿಟ್ಟು ಅಮಾವಾಸ್ಯೆ ಮಿಂದು ಬಂದ. ಲಕ್ಷ್ಮಿಯು ನಡೆದ ಸಂಗತಿಗಳನ್ನು ಅವನೊಡನೆ ಹೇಳಿ ಬಳಬಳ ಅತ್ತುಕೊಂಡಳು. ವಿಟ್ಟು ಮುಚ್ಚಿದ ತುಟಿ ಎರಡು ಮಾಡಲಿಲ್ಲ. ಆದರೆ, ಒಂದು ಉಪಕಾರ ಮಾಡಿದ. ಅದೇ ದಿನ ಲಕ್ಷ್ಮಿಯನ್ನು ನಮ್ಮಲ್ಲಿ ತಂದುಬಿಟ್ಟ. ನಮ್ಮಲ್ಲಿ ಬಂದು ಹದಿನೈದು ದಿವಸವಾಗಿದೆ ಮಾತ್ರ. ಲಕ್ಷ್ಮಿ ಚಾಪೆ ಹಿಡಿದಳು. ನಿತ್ಯದ ಜ್ವರವೆಂದು ಸುಮ್ಮನಿದ್ದೆ ನಾನು. ಮೂರನೆಯ ದಿನ ನಮ್ಮಕ್ಕ "ಜ್ವರ ಜೋರುಂಟು. ಲಕ್ಷ್ಮಿ ಏನೇನೋ ಮಾತಾಡುತ್ತಾಳೆ" ಅಂದಳು. ನಾನು ನೋಡಿದೆ. ಮೈ ಕಾದು ಕೆಂಡದಂತಿದ್ದಿತು ಕೂಡಲೇ ಊರ ವೈದ್ಯ ಚಂದು ಪೂಜಾರಿಯನ್ನು ಕರೆದುತಂದೆ ಅವನು ಪರೀಕ್ಷೆಮಾಡಿ ತಲೆಗೊಂದು ಲೇಪವನ್ನೂ, ಕುಡಿಯುವುದಕ್ಕೊಂದು ಕಷಾಯವನ್ನೂ ಕೊಟ್ಟು "ಚಿಂತಿಲ್ಲ"ವೆಂದನು. ಜ್ವರ ಏರುತ್ತಲೇ ಹೋಯಿತು. ಮದ್ದು ಮಾಡುತ್ತಲೇ ಹೋದೆವು. ಕೈಬಿಸಿ ಮಾಡದ್ದರಿಂದ ಮರುದಿವಸ ಬರುತ್ತೇನೆಂದ ವೈದ್ಯ ಬರಲೇ ಇಲ್ಲ. ಲಕ್ಷ್ಮಿಯು ಆಗಾಗ "ಬಂದರೋ.... ಬಯ್ಯಬೇಡಿ,....ಮರಣವೇ ಲೇಸು,........ಕೊನೆಯ ಸಲ........ದೇವರೇ ಕೊಂಡೊಯ್ಯು....ಮರ್ಯಾದೆ" ಇತ್ಯಾದಿ ಏನೇನೋ ಬಾಯಿಗೆ ಬಂದಂತೆ ಒದರ ತೊಡಗಿದಳು. ಹೆದರಿಕೆಯಾಯಿತು ವಿಟ್ಟುವಿಗೆ ಜನ ಕಳುಹಿಸಿದೆವು; ಬರಲೇ ಇಲ್ಲ. ಮನೆಯಲ್ಲಿದ್ದ ಕಟ್ಟಿದ ಕೋಳಿಯನ್ನು ಕೊಡುವುದಾಗಿ ಹೇಳಿ, ಚಂದು ಪೂಜಾರಿಯನ್ನು ಮರುದಿವಸ ಬೇಡಿ ಕರೆದು ತಂದೆ. ನೋಡಿದ. ನಾಲ್ಕು ಮಾತ್ರೆ ಕೊಟ್ಟು "ಗುಣವಾಗುವುದು"

ಎಂದ. ಕೋಳಿ ಹಿಡಿದುಕೊಂಡು ನಾಲ್ಕು ಮಾರು ಚಂದು ಪೂಜಾರಿಯ ಹಿಂದೆ ಹೋದೆ. ದಾರಿಯಲ್ಲಿ ಅವನು "ಇನ್ನು ಪ್ರಯೋಜನವಿಲ್ಲ. ಮನೆಯಲ್ಲಿ ಹೇಳಬೇಡ" ಅಂದ. ನನ್ನ ಬಾಯಾರಿತು. ಕಂಪಿಸುತ್ತ ಮನೆಗೆ ಬಂದೆ. ಕೂಡಲೇ ನಾನೇ ಹೋಗಿ ವಿಟ್ಟುವನ್ನು ಕರೆದುತಂದೆ. ದೂರದಲ್ಲಿ ಮಣೆಯ ಮೇಲೆ ಕುಳಿತ ಲಕ್ಷ್ಮಿಯ ಕಿವಿಯ ಹತ್ತಿರ ಬಾಯಿಟ್ಟು, ಗಟ್ಟಿಯಾಗಿ "ನಿನ್ನ ಗಂಡ" ಅಂದೆ. ಅರೆದೆರೆದ ದೃಷ್ಟಿಯಿಂದ ನಡುಗುವ ಕೈಗಳನ್ನು ಮುಂಚಾಚಿ, ಕ್ಷೀಣಸ್ವರದಿಂದ 'ಆ-ಯಿ-ತು' ಅಂದಳು. ವಿಟ್ಟು ಪಿಟ್ಟೆನ್ನದೆ ಹೊರಟುಹೋದ. ಆ ರಾತ್ರಿ ಲಕ್ಷ್ಮಿ ಅಳುವ ನಮ್ಮೊಡನಿರದೆ, ಸುಂದರಿಯಾಗಿ ಜನಿಸಿದ್ದಕ್ಕೆ ಗಂಜಿ ಇದ್ದ ಮನೆಗೆ ಕೊಟ್ಟದ್ದಕ್ಕೆ, ಬೇಕಾದಷ್ಟು ಸುಖತಿಂದು, ಈ ದುಷ್ಟ ಪ್ರಪಂಚವನ್ನು ಬಿಟ್ಟು ನಡೆದಳು. ಆರು ತಿಂಗಳು ದಾಟುವುದರೊಳಗೆ ಕೊರಗಿ ಸೊರಗಿ ಅಮ್ಮನೂ ಲಕ್ಷ್ಮಿಯೊಡನೆ ಸೇರಿಕೊಂಡಳು.

———

## ೫ ಮಾರಿಯೊಡನೆ ಸಂಥ!

ವೈಶಾಖ ಮಾಸದ ಕಡು ಬೇಗೆ. ಸ್ವಲ್ಪ ದಿವಸಗಳ ಮೊದಲು ಮುಂಗಾರು ಮಳೆಯ ಹನಿಗಳು ಉದುರಿ ಉಷ್ಣವು ಇಮ್ಮಡಿಯಾಗಿದ್ದಿತು. ಉಡುಪಿಯು ಸಮುದ್ರ ಕಿನಾರೆಯ ಪಟ್ಟಣವಾಗಿದ್ದರೂ ಉರಿಯು ಸಮತೆಯನ್ನು ಮಿಕ್ಕಿ ಅತಿ ವಿಷಮಸ್ವರೂಪವನ್ನು ಪಡೆದಿದ್ದಿತು. "ಎಂತಹ ಸೆಕೆ!" ಎಂಬ ಉದ್ಗಾರವೇ ಉಡುಪಿಯವರ ಪಲ್ಲವಿಯಾಗಿದ್ದಿತು. ಈ ಸಮಯದಲ್ಲಿ ಶೀತಲವಾದ ನೀರು ಅಮೃತ ಸಮಾನವಾಗುತ್ತಿದ್ದಿತು. ಒಂದೊಮ್ಮೆಗೆ ತಂಗಾಳಿ ಬೀಸಿತೆಂದರೆ ಎಲ್ಲರಿಗೂ ಕಾಳ್ಗಿಚ್ಚಿನಿಂದ ಹೊರಬಿದ್ದಷ್ಟು ಆನಂದ ಉಂಟಾಗುತ್ತಿತ್ತು. ಅಸಹನೀಯವಾದ ಈ ಸೆಕೆಯ ಪರಿಣಾಮವಾಗಿ ಉಡುಪಿಯಲ್ಲಿ ಸಿಡುಬು ತಲೆದೋರಿತು. ಜನರು ಗಾಬರಿಗೊಂಡು ತಬ್ಬಿಬ್ಬಾದರು. ರೋಗವು ಎಲ್ಲೆಯೋ ಒಂದೆರಡು ಮನೆಗಳಲ್ಲುಂಟಾಗಿದ್ದರೂ ಅದರ ಗಾಬರಿಯು ಮನೆಮನೆಗೆ ಹಬ್ಬಿ ಹಾವಳಿಮಾಡಿದ್ದಿತು. ದೈವಕ್ಕಿಂತಲೂ ಪಾತ್ರಿಯೇ ಜೋರಾದಂತೆ, ರೋಗಕ್ಕಿಂತಲೂ ಅದರ ಗಾಬರಿಯೇ ಜನರನ್ನು ಹೆಚ್ಚಾಗಿ ತಳಮಳಗೊಳಿಸಿತು. ಈ ಗಾಬರಿಯೇ

ರೋಗ ಪ್ರವೇಶಕ್ಕೆ ದಾರಿಮಾಡಿ ಕೊಟ್ಟಿತು. ಉಡುಪಿಯ ಪಡುಪೇಟೆಯಲ್ಲೆಲ್ಲಾ ಸಿಡುಬು ಸಾಕಷ್ಟು ಪ್ರಬಲವಾಗಿ ಹಬ್ಬಿತು. ಭಕ್ತಿ, ಭಜನೆ, ಪೂಜೆ, ಹರಕೆಗಳಿಗೆಲ್ಲಾ ಆರಂಭವಾಯಿತು ಭಜನೆ ಮೊದಲಾದುವುಗಳಿಂದ ನಿದ್ದೆಗೆಟ್ಟುದರಿಂದ ಸಿಡುಬು ಹೆಚ್ಚಾಯಿತೇ ಹೊರತು ಕಡಿಮೆಯಾಗಲಿಲ್ಲ. ದಾಕು ಹಾಕುವ ಕಾಟಕ್ಕಾರಂಭವಾಯಿತು. ಆದರೆ ದಾಕು ಹಾಕಿಸಿಕೊಂಡವರಿಗೂ ಸಿಡುಬು ಆಗದೆ ಹೋಗಲಿಲ್ಲ.

ಉಡುಪಿಯಿಂದ ಏಳೆಂಟು ಮೈಲು ದೂರದಲ್ಲಿರುವ ಕಾಪಿನಲ್ಲಿ ಒಂದಲ್ಲ, ಎರಡಲ್ಲ, ಮೂರು ಮಾರಿಗುಡಿಗಳಿವೆ. ಜನರಲ್ಲಿ ಸಿಡುಬು ಉಂಟಾದರೆ ಈ ಮಾರಿಗುಡಿಗಳಿಗೊಂದು ಕಾಲ. ಪಾತ್ರಿಗಳಿಗೊಂದು ಹಬ್ಬ. "ಠಾಣ್ಯ"ದವರಿಗೊಂದು ಉತ್ಸವ. ಈ ಮಾರಿಗುಡಿಗಳಲ್ಲಿ ಪ್ರತಿ ಮಂಗಳವಾರವೂ ತಪ್ಪದೆ ಪೂಜೆ, ದರ್ಶನಕ್ಕಾರಂಭವಾಯಿತು ಜನರು ಹಿಂಡುಗಟ್ಟಿ ಬಂದು ಹರಕೆ ಕಾಣಿಕೆ ಒಪ್ಪಿಸಿದರು ಬಂದಬಂದವರೆಲ್ಲಾ, ಅವರು ಶ್ರೀಮಂತರೆಂದಾದರೆ ಮಾರಿಯು ಮಾರಿಪೂಜೆಯನ್ನೇ ಕೇಳುತ್ತಿದ್ದಳು. ಇಲ್ಲವಾದರೆ, "ಒಂದು ಬಂಡಿ ಕಳುಹಿಸಿದ್ದೇನೆ; ಇನ್ನೊಂದನ್ನು ಸದ್ಯದಲ್ಲಿಯೇ ಕಳುಹಿಸುವೆನೆಂ"ದು ಬೆದರಿಸುತ್ತಿದ್ದಳು. ಊರೂರವರು ಒಂದುಗೂಡಿ ಮಾರಿಪೂಜೆ ಮಾಡಿಸಿ ತಮ್ಮ ಊರನ್ನು ಕಾಪಾಡಬೇಕೆಂದು ಅಂಗಲಾಚಿ ಬೇಡುತ್ತಿದ್ದರು. ಮಾರಿಯು "ಹೂಂ!" ಎಂದು ಅಭಯ ಕೊಡುತ್ತಿದ್ದಳು. ಆದರೆ ಜನರಿಗೆ ಸಿಡುಬು ಆಗುತ್ತಲೂ ಗುಣವಾಗುತ್ತಲೂ ಕೆಲವರು ಗತಿಸುತ್ತಲೂ ಇದ್ದರು. ಅಂತೂ ಮಾರಿಯ ಭಂಡಾರ ತುಂಬಿತು. ಧಾರಾಳ ಪ್ರಾಣಿಬಲಿಯೂ ಆಯಿತು.

ಉಡುಪಿಯ ಪಡುಪೇಟೆಯ ಕೆಲವು ಬ್ರಾಹ್ಮಣರೂ ಕಾಪಿಗೆ ಹೋಗಿ ಮಾರಿಯ ಮಾತಿನ ಮೇರೆಗೆ ನಿಸ್ಸಂಕೋಚವಾಗಿ ಕೋಳಿ ಕುರಿ ಕಡಿಸುತ್ತಿದ್ದರು. ಆದರೆ ಪಡುಪೇಟೆಯ ನಾರಾಯಣ ಭಟ್ಟರು ಮಾರಿಯಮ್ಮನ ದರ್ಶನಕ್ಕೆ ಹೋಗಲೂ ಇಲ್ಲ; ಯಾವತರದ ಹರಕೆಯನ್ನಾದರೂ ಮಾರಿಗೆ ಸಲ್ಲಿಸಿದ್ದೂ ಇಲ್ಲ. ಅವರು ಪ್ರಾಣಿಹಿಂಸೆಗೆ ಬದ್ಧವಿರೋಧಿಗಳಾಗಿದ್ದರು. "ಸಿಡುಬು ಬರಲಿ, ಪ್ಲೇಗು ಬರಲಿ, ನಾನು ಕ್ರೂರ ಮಾರಿದರ್ಶನಕ್ಕೆ ಹೋಗಲಾರೆನು" ಎಂದು ದೃಢನಿರ್ಧಾರ ಮಾಡಿಕೊಂಡಿದ್ದರು.

ಆದರೆ ನೆರೆಕರೆಯವರೆಲ್ಲಾ ಪ್ರತಿ ಮಂಗಳವಾರ ಮಾರಿದರ್ಶನಕ್ಕೆ

 

ಹೋಗುವಾಗ ನಾರಾಯಣಭಟ್ಟರ ಮನೆಯ ಹೆಂಗುಸರು ಅವರೂ ಹೋಗಬೇಕೆಂದು ಎಡೆಬಿಡದೆ ಕಾಡುತ್ತಿದ್ದರು. ನಾರಾಯಣಭಟ್ಟರ ದೊಡ್ಡ ಮಗನಿಗೆ ಸಿಡುಬು ಆರಂಭವಾದ ಮೇಲಂತೂ ಈ ಕಾಟವು ಮಿತಿಮೀರಿತು. ನಾರಾಯಣಭಟ್ಟರು ಮನಸ್ಸಿಲ್ಲದ ಮನಸ್ಸಿನಿಂದ ಕಾಪು ಮಾರಿದರ್ಶನಕ್ಕೆ ಹೋಗಲೇಬೇಕಾಯಿತು. ಭಟ್ಟರಿಗೆ ಮಡಿ ಮೈಲಿಗೆ ಜಾಸ್ತಿ. ಅವರಿಗೆ ಗುಡಿಯ ಹತ್ತಿರ ಹೋಗುವುದಕ್ಕೇನೇ ಅಸಹ್ಯವಾಯಿತು. ಅಂತೂ ಕುರಿ ಕೋಳಿಗಳನ್ನು ಮಾನವ ರಾಕ್ಷಸರು ನಿರ್ದಯರಾಗಿ ಕಡಿದು ಸುರಿಯುವ ರಕ್ತಧಾರೆಯನ್ನು ನೋಡಿ, ಅವರ ತಲೆಯು ಗಿರ್ರನೆ ತಿರುಗಿತು. 'ಶ್ರೀ ಕೃಷ್ಣ!' ಎಂದು ಅವರು ಗುಡಿಯ ಗೋಡೆಗೆ ಒರಗಿ ತುಸುಹೊತ್ತು ಕಂಬದಂತೆ ಸುಮ್ಮನಿದ್ದರು. ಅನಂತರ ಆ ಭೀಷಣ ದೃಶ್ಯದ ಕಡೆಗೇನೆ ನೋಡದೆ ಗರ್ಭಗುಡಿಯ ಒಳಕ್ಕೆ ನಡೆದರು. ಆಗ ದರ್ಶನ ಸಮಯವಾಗಿತ್ತು. ಪಾತ್ರಿಯ ಆವೇಶ, ಕಣ್ಣು ಕೆರಳಿಕೆ, ಹಾವಭಾವಗಳನ್ನೆಲ್ಲಾ ನೋಡಿ, ಹೊಸತಾಗಿ ಬಂದವರಾರಾದರೂ ಬೆರಗಾಗಿ ಹೋಗಬೇಕಾಗಿದ್ದಿತು.

ಪಾತ್ರಿಯ ದರ್ಶನಕ್ಕಾರಂಭವಾಯಿತು. "ಅಲ್ಲಿಗೆ ಅಷ್ಟು ಗಣ ಕಳುಹಿಸಿದ್ದೇನೆ! ಇಲ್ಲಿಗೆ ಇಷ್ಟು ಬಂಡಿ ಕಳುಹಿಸಿದ್ದೇನೆ! ಆ ಮನೆಯಲ್ಲಿ ಅಷ್ಟು ಹುರುಳಿ ಬಿತ್ತಿದ್ದೇನೆ! ಈ ಮನೆಯಲ್ಲಿ ಇಷ್ಟು ಬಿತ್ತಿದ್ದೇನೆ!" ಎಂದೆಲ್ಲಾ ನುಡಿಯಾದ ಮೇಲೆ ಜನರು ಒಬ್ಬೊಬ್ಬರೇ ತಮ್ಮ ಸಂಕಷ್ಟಗಳನ್ನು ಮಾರಿಯಿದಿರಲ್ಲಿ ನಿವೇದಿಸತೊಡಗಿದರು. ಮಾರಿಪೂಜೆ, ಗದ್ದುಗೆಪೂಜೆ, ಪವನುಪವನು ಕಾಣಿಕೆ, ದಂಡುಕೋಳಿ, ಕುರಿ ಸಮರ್ಪಣೆಯಲ್ಲದೆ ಬೇರೆ ಮಾತೇ ಮಾರಿಯ ಬಾಯಿಯಿಂದ ಹೊರಡದು. ನಾರಾಯಣಭಟ್ಟರಿಗೆ ಗರ್ಭಗುಡಿಯೊಳಗಿನ ಜನರ ಗುಂಪಿನಿಂದ ಉಸುರುಗಟ್ಟಿದಂತಾಯಿತು. ಮಾರಿಯ ಕ್ರೂರವಾಕ್ಯಗಳನ್ನು ಕೇಳಿ ಅತ್ಯಂತ ಖೇದವುಂಟಾಯಿತು. ಅವರು ಹೊರಹೋಗಲು ಆಸ್ಪದವಿಲ್ಲದೆ ಒಂದು ಮೂಲೆಯಲ್ಲಿ ಗೊಂಬೆಯಂತೆ ನಿಂತುಬಿಟ್ಟರು. ಜನರು ಒಬ್ಬೊಬ್ಬರೇ ತಮ್ಮ ತಮ್ಮ ಕಾಣಿಕೆ ಹರಕೆಗಳನ್ನೊಪ್ಪಿಸಿ ಗಂಧಪ್ರಸಾದ ಪಡೆದು ಹೊರಹೋದಮೇಲೆ ಕೊನೆಗೆ ನಾರಾಯಣಭಟ್ಟರೂ ಪಾತ್ರಿಯ ಇದಿರಲ್ಲಿ ಬಂದುನಿಂತರು. ತನ್ನ ಮಗನಿಗೆ ಮೈಲಿಗೆಯಾಗಿದೆಯೆಂದು ಹೇಳಿಕೊಂಡರು. "ಹೌದು! ನಾನು ಪ್ರೀತಿಯಿಂದ ಒಂದು ಮುಷ್ಟಿ ಹುರುಳಿ ಬಿತ್ತಿಬಿಟ್ಟಿದ್ದೇನೆ"ಂದು ಮಾರಿಯು

ಉತ್ತರಕೊಟ್ಟಳು. ನಾರಾಯಣಭಟ್ಟರು "ಹೇಗೂ ಗುಣಮಾಡಿ ಕೊಡ ಬೇಕೆ"ಂದು ಮೆಲ್ಲಗೆ ನುಡಿದರು. ಮಾರಿಯು, "ಗುಣಮಾಡಿ ಕೊಟ್ಟರೆ ನನಗೇನು?" ಎಂದು ಪ್ರಶ್ನಿಸಿದಳು. ನಾರಾಯಣಭಟ್ಟರು "ಒಂದು ವರಹ ಕಾಣಿಕೆ ಒಪ್ಪಿಸುವೆನೆ"ಂದರು. "ಅದಾಗದು! ಜೋಡು ಗದ್ದುಗೆ ಪೂಜೆ; ಒಂದು ದಂಡು ಕೋಳಿ ಮತ್ತು ಒಂದು ಕುರಿಯನ್ನೊಪ್ಪಿಸಬೇಕೆ"ಂದು ಮಾರಿಯು ಕೇಳಿದಳು. ನಾರಾಯಣಭಟ್ಟರು, "ಗದ್ದುಗೆ ಪೂಜೆ ಕೊಡಬಹುದಾದರೂ ನಾನು ಬ್ರಾಹ್ಮಣನಾಗಿರುವುದರಿಂದ ಪ್ರಾಣಿಬಲಿಯನ್ನೀಯಲಾರೆನು. ಹಣ್ಣುಕಾಯಿ ಬೇಕಾದರೆ ಒಪ್ಪಿಸುವೆನೆಂ"ದರು. ಮಾರಿಯು ರೇಗಿದಳು. "ಬ್ರಾಹ್ಮಣರಾದರೇನು? ಯಾರಾದರೇನು? ಇತರ ಬ್ರಾಹ್ಮಣರು ನನಗೆ ಪ್ರಾಣಿಬಲಿ ಅರ್ಪಿಸಿಲ್ಲವೇ? ನನ್ನ ಗಣಗಳಿಗೆ ರಕ್ತದಿಂದಲ್ಲದೆ ಬೇರೆ ತೃಪ್ತಿಯಾಗಲಾರದು. ಮಗ ಬದುಕಬೇಕಾದರೆ ಪ್ರಾಣಿಬಲಿ ಕೊಡಿರಿ. ಇಲ್ಲವಾದರೆ ಒಂದಲ್ಲ, ಎರಡಲ್ಲ, ನಾಲ್ಕು ನರಬಲಿ ಪಡೆಯಲು ಸಾಧ್ಯವಾಗುವುದೋ ನೋಡುವೆನೆಂ"ದು ಬೆದರಿಕೆ ಹಾಕಿದಳು. ಮುಂಗೋಪಿಯಾದ ನಾರಾಯಣಭಟ್ಟರಿಗೆ ಮಾರಿಗಿಂತ ಇಮ್ಮಡಿ ಸಿಟ್ಟೇರಿತು. ಅವರು ಸಿಟ್ಟಿನ ಭರದಿಂದ ನಡುಗಲಾರಂಭಿಸಿದರು. "ಒಂದು ಪ್ರಾಣರಕ್ಷಣೆಗಾಗಿ ನಿರ್ದೋಷವಾದ ಅನೇಕ ಪ್ರಾಣ ನಾಶಮಾಡುವ ಭಯಂಕರ ಪಾಪವನ್ನು ಬ್ರಾಹ್ಮಣನಾದ ನಾನು ಎಂದೆಂದಿಗೂ ಮಾಡೆನೆಂ"ದು ಜನಿವಾರ ಸಾಕ್ಷಿಯಾಗಿ ಹೇಳಿಬಿಟ್ಟರು. ಮಾರಿಯೂ ನಾರಾಯಣಭಟ್ಟರ ದೃಢನಿರ್ಧಾರದಿಂದ ಒಂದೊಮ್ಮೆಗೆ ತಬ್ಬಿಬ್ಬಾದಳು. "ವಾಲಗ" ಎಂದು ದರ್ಶನಕ್ಕಾರಂಭ ಮಾಡಿತು. ಜೋರಿನಿಂದ ವಾಲಗವಾಯಿತು. ಪಾತ್ರಿಯು ಹಾರಿಹಾರಿ ಬೀಳಲಾರಂಭಿಸಿದನು. ಕೂಗತೊಡಗಿದನು. ನಾನಾ ವಿಕಾರ ಚೇಷ್ಟೆಮಾಡತೊಡಗಿದನು. ಜನರೆಲ್ಲರೂ ಬೆದರಿಬೆಪ್ಪಾಗಿ ಹೋದರು. ಆದರೆ ನಾರಾಯಣಭಟ್ಟರು ಅಚಲರಾಗಿ ನಿಂತಿದ್ದರು. "ಆಯ್ತು! ನೀವು ಪ್ರಾಣಿಬಲಿ ಕೊಡುವುದು ಬೇಡ. ನಿಮ್ಮ ಸಮೇತ ನಾನು ಬೇಕಷ್ಟು ಬಲಿ ತೆಗೆದುಕೊಳ್ಳಲು ಸಾಧ್ಯವಾಗುವುದೋ ನೋಡುವೆನು! ಜಾಗ್ರತೆ!" ಎಂದು ಮಾರಿಯು ಭಯಂಕರ ಬೆದರಿಕೆ ಹಾಕಿದಳು. ಭಟ್ಟರು ಇನ್ನೂ ಕ್ರೋಧೋನ್ಮತ್ತರಾದರು. ತನ್ನನ್ನು ತಾನೇ ಮರೆತುಬಿಟ್ಟರು. "ಆಯ್ತು ಹಾಗಾದರೆ! ನೀನು ಈ ರೀತಿಯ ಮಹಾ

ಕ್ರೂರಿ ರಾಕ್ಷಸಿಯಾದರೆ ನನ್ನ ಪ್ರಾಣವನ್ನೇ ತೆಗೆದುಕೊಳ್ಳಬೇಕು. ಆದರೂ ನಾನು ನಿನಗೆ ನಿರ್ದೋಷಿ ಪ್ರಾಣಿಗಳನ್ನು ಅರ್ಪಿಸೆನು. ನೀನು ಎಷ್ಟು ಬೆದರಿಸಿದರೂ ನಾನು ಸೊಪ್ಪು ಹಾಕಲಾರೆನು. ಶಕ್ತಿಯಿದ್ದರೆ ನನ್ನನ್ನೇ ನೀನು ಬಲಿಯಾಗಿ ತೆಗೆದುಕೊ! ಇದರಲ್ಲಿ ನನಗೂ ನಿನಗೂ ಬೇಕಾದರೆ ಪಂಥ!'' ಎಂದರು. ಪಾತ್ರಿಯು ಒಳಗೊಳಗೆ ಬೆದರಿದನು. ಆದರೂ ಅಟ್ಟ ಹಾಸದಿಂದ ಪುನಃ, "ವಾಲಗ!'' ಎಂದು ದರ್ಶನಕ್ಕಾರಂಭಿಸಿ ನಾನಾ ಭಯಂಕರ ಅಂಗಚೇಷ್ಟೆ ತೋರಿಸಿ ಒಂದು ಸುತ್ತು ದರ್ಶನ ಬಂದನು. ಬಳಿಕ ನಿಶ್ಚಲವಾಗಿ ನಿಂತಿದ್ದ ನಾರಾಯಣ ಭಟ್ಟರನ್ನು ದಿಟ್ಟಿಸಿ ನೋಡಿ "ನನ್ನೊಡನೆ ಪಂಥ!" ಎಂದು ವಿಕಾರವಾಗಿ ನಕ್ಕು, "ಹಾಗಾದರೆ ಹಿಡಿಯಿರಿ ಗಂಧ! ಇಂದಿನಿಂದ ಒಂದು ವಾರದೊಳಗೆ ನಿಮಗೆ ಈ ಫಲ ಪ್ರತ್ಯಕ್ಷ ತೋರಿಬರದಿದ್ದರೆ ನಾನು ಮಾರಿಯಲ್ಲ!'' ಎಂದು ಸಿಟ್ಟಾಗಿ ನುಡಿದನು. ನಾರಾಯಣ ಭಟ್ಟರು ಒಂದಿಷ್ಟೂ ಬೆದರದೆ ಗಂಧ ಪಡೆದು ಹೊರ ನಡೆದು ಬಿಟ್ಟರು.

ನಾರಾಯಣ ಭಟ್ಟರ ದೊಡ್ಡ ಮಗನಿಗೆ ಸಿಡುಬು ಗುಣವಾಗಿ ಮನೆಯ ಹೆಂಗುಸರಿಬ್ಬರಿಗೆ ಆರಂಭವಾಯಿತು. ಜನರೆಲ್ಲರೂ ನಾರಾಯಣ ಭಟ್ಟರ ದುಡುಕಿಗೆ ಅವರನ್ನು ನಾನಾ ವಿಧವಾಗಿ ಟೀಕಿಸಹತ್ತಿದರು. ಜನರು ಏನೆಂದರೂ, ಮನೆಯ ಹೆಂಗಸರು ಎಷ್ಟೊಂದು ಗಾಬರಿಗೊಂಡರೂ ನಾರಾಯಣ ಭಟ್ಟರು ಧೃತಿಗೆಡದೆ ಎಲ್ಲರಿಗೂ ಧೈರ್ಯ ಹೇಳಿ ತಾನೇ ರೋಗಿಗಳನ್ನು ಉಪಚರಿಸಹತ್ತಿದರು. ಅವರಿಗೆ ಅಸಾಮಾನ್ಯ ಧೈರ್ಯವುಂಟಾಗಿದ್ದಿತು. ಮನೆಯವರೆಲ್ಲರೂ ಅವರ ಸಮಾಧಾನದಂತೆ ಕೊನೆಕೊನೆಗೆ ಧೈರ್ಯ ತಾಳಿದರು. ನಾರಾಯಣ ಭಟ್ಟರು ಮಾರಿಯೊಡನೆ ಪಂಥಹಾಕಿ ಬಂದುದರಿಂದ ಅವರೂ ಅವರ ಮನೆಯವರೂ ಮಾರಿಗೆ ಬಲಿಯಾಗುವುದು ನಿಶ್ಚಯವೆಂಬ ಮಾತು ಉಡುಪಿಯಲ್ಲಿ ಎಲ್ಲೆಲ್ಲಿಯೂ ಹಬ್ಬಿತ್ತು. ಆದರೆ ಭಟ್ಟರ ಮನೆಯಲ್ಲಿ ಎಲ್ಲರಿಗೂ ಸಿಡುಬು ಗುಣವಾಗಿ ಸ್ನಾನವಾಯಿತು. ನಾರಾಯಣ ಭಟ್ಟರಿಗೆ ಮೈಲಿಗೆ ಆಗಲೇ ಇಲ್ಲ!

## ೬ ಶೆಟ್ರ ಮನೆಯ ಮದುವೆ

ಇಂದು ಹಲಸಿನ ಕೆರೆಯ ಶೆಟ್ರ ಮನೆಯಲ್ಲಿ ವಿವಾಹ ಸಮಾರಂಭದ ಭಾರಿಗೌಜಿ! ಅವರ ಪ್ರಸಿದ್ಧಿಯು ಆ ಊರಿನಲ್ಲೆಲ್ಲಾ ಜನಜನಿತವಾಗಿ ಅವರ ಕೀರ್ತಿ ಪ್ರವಾಹದಲ್ಲಿ ನಿಜವಾದ ಹೆಸರು ಮುಳುಗಿಹೋಗಿ, 'ಶೆಟ್ರು' ಎಂದು ಅದರ ತಲೆ ಮಾತ್ರ ತೇಲಾಡುತ್ತಿದ್ದುದರಿಂದ ಊರಿನವರ ಮಾದರಿಯನ್ನು ಅನುಸರಿಸಿ ನಾವೂ ಅವರನ್ನು ಹಾಗೆಯೇ ಸಂಬೋಧಿಸೋಣ.

ಶೆಟ್ರ ಮನೆಯ ಮದುವೆ. ಅದರಲ್ಲೂ ಅವರ ಮನೆಯಲ್ಲಿ ಸುಮಾರು ಅರ್ಧ ಶತಮಾನದಿಂದ ಈಚೆಗಿನ ವಿವಾಹವೆಂದರೆ ಇದೊಂದೇ! ಆದುದರಿಂದ ಇಂದಿನ ಸಂಭ್ರಮ ಆಡಂಬರಗಳನ್ನು ವರ್ಣಿಸುವ ಅಗತ್ಯವೇ ಇಲ್ಲ. ಆ ಊರಲ್ಲಿ ಎತ್ತ ಹೋದರೂ ಶೆಟ್ರ ಆಸ್ತಿ, ಒಕ್ಕಲುಗಳು ಜಿರಿಕೆ ಯಿಲ್ಲದ ಸ್ಥಳವೇ ಇಲ್ಲವೆನ್ನಬಹುದು. ಇನ್ನು ಆಪ್ತೇಷ್ಟರಂತೂ ಈ ವರೆಗೆ ಶೆಟ್ರಿಂದ ಪಡೆದ ಸಹಾಯ ಸಂಪತ್ತಿಗೆಲ್ಲಾ ಬಡ್ಡಿ ಕೂಡಿಸಿ ಹಿಂದೆ ಸಲಿಸಲು ಇದೊಂದೇ ಸಂದರ್ಭವೆಂದು ವಿವಾಹದ ದಿನವನ್ನು ಮೊದಲೇ ಕಾದಿದ್ದರು. ಹಲವು ವರ್ಷಗಳಿಂದ ಅನೇಕ ಕಡೆಗಳಲ್ಲಿ ಮದುವೆಯ ಮುಯ್ಯಿಯ ರೂಪದಿಂದ ಚದರಿದ್ದ ಹಣವು ಇಂದು ಒಟ್ಟಾಗಿ ಶೆಟ್ರ ಕಿಸೆ ಯನ್ನು ಸೇರಲು ಕಾಯುತ್ತಿದೆ. ಒಂದೆಡೆಯಲ್ಲಿ ನೀರಿನಂತೆ ವ್ಯಯವಾಗುತ್ತಿರುವ ಸಂಪತ್ತಿನ ಇಳಿತ! ಇನ್ನೊಂದೊಡೆಯಲ್ಲಿ ಆಪ್ತೇಷ್ಟರಿಂದ ತುಂಬಿ ಬರುವ ಧನದ ಭರತ!! ಬೇರೊಂದೆಡೆಯಲ್ಲಿ ಕೂಡಿ ಬಂದ ಜನ ಸಮುದಾಯದ ಕೋಲಾಹಲ! ಇವುಗಳಿಂದ ಶೆಟ್ರ ಮನೆಯು ಇಂದು ಮಹಾಸಾಗರದಂತೆ ಕಂಗೊಳಿಸುತ್ತಿದ್ದಿತು. ಎಲ್ಲೆಡೆಯಲ್ಲೂ ಸುಳಿದು, ಗರ್ಜಿಸಿ, ಸಕಲ ಪಾತ್ರಗಳಿಗೂ ಒಬ್ಬನೇ ನಟನಾಗಿ ಅಭಿನಯಿಸುತ್ತಿದ್ದ ಶೆಟ್ರ ಇಂದಿನ ಅವಸ್ಥೆಯನ್ನು ನೋಡುವಾಗ, ರಾವಣನ ಕೈ ಬಾಯಿಗಳಿದ್ದರೂ ಅವರಿಗೀಗ ಹೆಚ್ಚಾಗುತ್ತಿದ್ದಿಲ್ಲವೆಂಬಂತೆ ತೋರುತ್ತಿತ್ತು.

ಶೆಟ್ರ ಮನೆಯಲ್ಲಿ ಒಂಭತ್ತು ಧಾರೆಯ ಮದುವೆಯೆಂದು ಸುಮಾರು ಆರು ತಿಂಗಳುಗಳಿಂದಲೂ ಎಲ್ಲೆಲ್ಲಿಯೂ ಸುದ್ದಿ. ಒಕ್ಕಲುಗಳಿಂದ ಬಿದಿರು, ಕಂಗು, ಸೋಗೆ ಮುಂತಾದುವುಗಳ ಆಮದು ಅಂದಿನಿಂದಲೇ ಶುರು. ಧನಿಯ ಮನೆಯ ಮದುವೆಗೆಂದು ಅವರ ಹಿತ್ತಿಲುಗಳ ಕಾಯಿಪಲ್ಯಗಳು ಕಾಪಿಡಲ್ಪಟ್ಟಿದ್ದು ಸುಮುಹೂರ್ತವನ್ನು ಕಾಯುತ್ತಿವೆ ಈ ವರೆಗೆ

ತಿಂಗಳಿಗೆರಡು ದಿನದಂತಿದ್ದ ಬಿಟ್ಟಿಯು ಈಗ ದಿನಂಪ್ರತಿ ಶುರುವಾಗಿ ಒಕ್ಕಲುಗಳ ಮನೆಯ ಕೆಲಸಗಳು ಬಾಕಿಯುಳಿದಿವೆ.

ಇತ್ತ ಒಂಭತ್ತು ಧಾರೆಯ ಗುರಿಯನ್ನು ಮುಟ್ಟುವ ಮಹದಿಚ್ಛೆಯಿಂದ ಶೆಟ್ರು ಆಪ್ತೇಷ್ಟರು ವರಾನ್ವೇಷಣದ ದಿಗ್ವಿಜಯಕ್ಕಾಗಿ ನಾಲ್ಕೂ ಕಡೆ ಹೊರಟಿದ್ದಾರೆ. ತ್ರೇತಾಯುಗದಲ್ಲಿ ವಾನರಸೇನೆಯು ಇದೇ ರೀತಿ ಸೀತಾನ್ವೇಷಣಕ್ಕೆ ಹೊರಟಿರಬಹುದು. ದ್ವಾಪರದಲ್ಲಿ ರಾಜಸೂಯ ಯಾಗದ ಧರ್ಮರಾಯನ ಪರಿವಾರವು ಇದರಂತೆಯೇ ಸಂಚರಿಸಬಹುದು. ಆದರೆ ಕಲಿಯುಗದಲ್ಲಿಯೂ ಅವುಗಳ ಸರಿಹೋಲಿಕೆಗೆ ನಿಲ್ಲುವ ದಿಗ್ವಿಜಯವೆಂದರೆ ಶೆಟ್ರು ಪರಿವಾರದ್ದೇ ಸರಿ. ಈ ಪರಿವಾರವು ವರನ ಕುಲ, ಬಲಿ, ಯೋಗ್ಯತೆ, ಮುಖ್ಯವಾಗಿ ವರದಕ್ಷಿಣೆ ಇವುಗಳಲ್ಲೆಲ್ಲಾ ಕೂಡಿಬಂದ ಕೆಲವು ಯುವಕರನ್ನು ಆರಿಸಿ ನಿಶ್ಚಯಸೂತ್ರದಿಂದ ಬಿಗಿಯುವುದನ್ನು ಮಾತ್ರ ಬಾಕಿಯಿಟ್ಟು ಹಿಂತಿರುಗಿತು.

ಆದರೆ ಅನಿಶ್ಚಿತ ವರರಿಗೆ ಇತರ ಕಡೆಗಳಿಂದ ತುಂಬಿದ ವರದಕ್ಷಿಣೆಯ ಹಸ್ತಗಳ ಎಳೆದಾಟವು ಬಲವಾದ್ದರಿಂದ ಶೆಟ್ರು ಒಪ್ಪಂದದ ಸಡಿಲಾದ ಸೂತ್ರವು ತುಂಡಾಗಿ ಇಂದು ಅವರ ಮನೆಯಲ್ಲಿ ಎರಡೇ ಧಾರೆ! ಒಂದು ಅವರ ಐದನೇ ಮಗಳು ಶಾಂಭವಿಗೆ. ಇನ್ನೊಂದು ಮಗಳ ಮಗಳು ರಾಜೀವಿಗೆ. ೬೫ ವರ್ಷ ಪ್ರಾಯದ ಶೆಟ್ರಿಗೆ ಶಾಂಬವಿಯು ಐದನೇ ಮಗಳಾದರೂ ಅವರ ೩೫ನೇ ವರ್ಷದಲ್ಲಿ ಹುಟ್ಟಿದವಳಂತೆ, ಅವಳ ಮುಖವೆಲ್ಲಾ ನೆರಿಗೆ ಬಿದ್ದಿತ್ತು. ಮಗಳ ಮದುವೆಯ ವಿಷಯದಲ್ಲಿ ಶೆಟ್ಟರು ಈ ವರೆಗೂ ಉದಾಸೀನದಿಂದ ಇದ್ದರೆನ್ನಲಾಗುವುದಿಲ್ಲ. ಈ ಕುರಿತು ಬಹಳ ವರ್ಷಗಳಿಂದಲೂ ಮಂದಗಮನದಿಂದ ನಡೆಯುತ್ತಿದ್ದ ಶೆಟ್ರು ಆಲೋಚನೆಯು ಕೆಲವು ವರ್ಷಗಳಿಂದೀಚೆಗೆ ತೀವ್ರ ಸಂಚಾರಿಯಾಗಿತ್ತು. ಆದರೆ ಪ್ರತಿ ಸಲವೂ ಯಾವುದಾದರೊಂದು ಎಡರು ತಪ್ಪದೆ ಬರುತಿದ್ದು, ಈ ವಿವಾಹವನ್ನು ಶೆಟ್ರು ವರ್ಷದಿಂದ ವರ್ಷಕ್ಕೆ ಮುಂದೂಡುತ್ತಿದ್ದರು. ಇತ್ತೀಚೆಗೆ ಅವರ ಸೊಸೆ ಮಕ್ಕಳೂ ವಿವಾಹಕ್ಕೆ ಬೆಳೆದುದರಿಂದ ದೊಡ್ಡ ಧಾರೆಯ ಮದುವೆಯನ್ನೆಬ್ಬಿಸಿ ಕೊಪ್ಪರಿಗೆಯೊಡನೆ ಕವಳಿಗೆಗಳನ್ನೆಲ್ಲಾ ತೊಳೆದು ಬಿಡಬೇಕೆಂದು ನೆನೆಸಿದ್ದರು. ಆದರೆ ಹೊಸ ಸಂಬಂಧಿಕೆಗಳೆಲ್ಲಾ ಒಂದೊಂದೇ ಸಡಿಲಾಗಿ ಇನ್ನೂ ಮುಂದರಿಸಲಸಾಧ್ಯವಾದ ಶಾಂಭವಿಯ

ಮದುವೆಯನ್ನಾದರೂ ಮಾಡಿ ಬಿಡುವುದೆಂದು ನಿಶ್ಚಯಿಸಿದರು. 'ಉಡಲು ಪೀತಾಂಬರವೇ ಆಗಬೇಕು. ಕ್ರಯ ಎರಡೇ ರೂಪಾಯಿ' ಎಂಬಂತೆ ಧನವಂತ ವಿದ್ಯಾವಂತ ಹುಡುಗನಾಗಬೇಕು; ವರದಕ್ಷಿಣೆ ಎರಡು ಸಾವಿರದೊಳಗಿರಬೇಕು, ಎಂದು ಈ ವರೆಗೆ ಹುಡುಕುತ್ತಿದ್ದ ಶೆಟ್ಟರು ಈಗ ಹೇಗಾದರೂ ವಿವಾಹವನ್ನೊಮ್ಮೆ ಮಾಡಿಬಿಡುವೆನೆಂದು ಚಡಪಡಿಸಹತ್ತಿದರು. ಕಡೆಗೆ ಅವರಿವರನ್ನು ಬಿಟ್ಟು ಹತ್ತಿರದ ಸಂಬಂಧಿಯೊಬ್ಬನನ್ನು ಹಿಡಿಯಬೇಕಾಯಿತು. ಶಾಂಭವಿಯ ಅಕ್ಕಂದಿರಲ್ಲಿ ಒಬ್ಬರ ನಂತರ ಒಬ್ಬಗನ್ನು ಕ್ರಮವಾಗಿ ಮೆಟ್ಟಲು ಇಳಿದಂತೆ ಮೂರೂ ಮಂದಿಯನ್ನೂ ವಿವಾಹವಾಗಿ, ಐದಾರು ಮಕ್ಕಳ ತಂದೆಯೆನಿಸಿ, ಸಂಸಾರ ಸುಖದ ಹಳೇ ಅನುಭವಿಯೂ ಶಾಂಭವಿಯ ಕುಟುಂಬದ ಸ್ತ್ರೀಯರ ಆಳ್ವಿಕೆಯಲ್ಲಿ ತೇರ್ಗಡೆ ಹೊಂದಿದವರೂ ಆದ, ನವವಿಧುರ ಲಿಂಗಪ್ಪ ಹೆಗ್ಡೆಯವರೇ ಪುನಃ ಚುನಾಯಿಸಲ್ಪಟ್ಟರು. ಬೇಗನೆ ಮುರಿದುಬಿದ್ದು, ತನ್ನನ್ನು ಶೋಕವೆಂಬ ಕೆಳಗಿನ ಮಡುವಿಗೆ ಹಾಕುವ ಈ ಕುಂಬು ಕಟ್ಟಿಗೆಯನ್ನೇ ತನಗೆ ಆಧಾರಕ್ಕೆ ಕೊಡುವರೇ ಎಂದು ಶಾಂಭವಿಯು ಎಲ್ಲಿಯಾದರೂ ಕಣ್ಣೀರು ಸುರಿಸಿದರೆ "ನಿನ್ನನ್ನು ಮುದುಕಿಯನ್ನು ಇನ್ನು ಯಾರು 'ಕಾರ್ಕಳ'ದವನು ಕೊಂಡುಹೋಗುವುದೋ"? ಎಂದು ಇಷ್ಟರ ತನಕ ತಾಳ್ಮೆಯಿಂದ ಇದ್ದುದೂ ಅವಳ ಅಪರಾಧವೆಂಬಂತೆ ತಾಯಿಯೊಮ್ಮೆ ಗದರಿಸಿಬಿಟ್ಟಳೆಂದರೆ, ಪಾಪ! ಆ ಅನಾಥೆಯು ನಿರುಪಾಯಳಾಗಿ ಕೂತುಕೊಳ್ಳಬೇಕಾಗಿತ್ತು. ಇನ್ನೊಂದು ಧಾರೆಯೆಂದರೆ ಶೆಟ್ರ ಮಗಳ ನಾಲ್ಕು ವರ್ಷದ ಮಗುವಿಗೆ. ಅವರ ಮಗನ ಒಂಭತ್ತು ವರ್ಷದ ಹುಡುಗನೇ ವರನು. ತಾನು ಸಾಯುವ ಮೊದಲು ಮೊಮ್ಮಗಳ ಮದುವೆಯನ್ನು ನೋಡಬೇಕೆಂದು ಮುತ್ತಜ್ಜಿಯ ಒತ್ತಾಯ. ನೆಲ ಮುಟ್ಟಲು ಆರೇ ಇಂಚು ಇರುವವರೆಗೆ ಬಾಗಿದ ಬೆನ್ನಿನಿಂದ ಅಲ್ಲಿಂದಲೇ ಮೊಮ್ಮಗಳಿಗೊಮ್ಮೆ ಸೇಸೆ ಹಾಕಿ ಸ್ವರ್ಗವನ್ನೇ ಸೇರುವೆನೆಂದು ಮುದುಕಿಯ ಆಶೆ. ಧಾರೆಯ ಮಣೆಯಲ್ಲಿ ಕಳಿತ ಸುಖವು ಮರೆಯಾಗುತ್ತಾ ಬರುತ್ತಿರುವಾಗ, ಇನ್ನೊಮ್ಮೆ ಮಗಳೊಡನೆ ಶೃಂಗರಿಸಿಕೊಂಡು ಮಣೆಯಲ್ಲಿ ಕುಳಿತುಕೊಳ್ಳುವ ಸಂತೋಷ ಮಗುವಿನ ತಾಯಿ ಬೇಡವೆನ್ನುವಳೇ?

ಶೆಟ್ಟರಂತೂ ಚಿಕ್ಕಂದಿನಲ್ಲಿಯೇ ಮದುವೆಮಾಡಿ ಬಿಡದಿದ್ದರೆ ಆಗುವ

ಪೇಚಾಟವನ್ನು ಅನುಭವದಿಂದಲೇ ಕಂಡುಕೊಂಡಿರುವರು. ಇನ್ನು ಈ ವರೆಗೆ ಮದುವೆಯಾಟವಾಡಿ ಮಣ್ಣಿನಲ್ಲಿ ಆಡುತ್ತಿದ್ದ ಮಕ್ಕಳು ಇಂದು ಗಂಡ ಹೆಂಡಿರಾಗಿ ಮುಂಡಾಸು ಜಡೆಗೊಂಡೆಗಳ ಅಲಂಕಾರದಿಂದ ಮುದ್ದಾಗಿ ಧಾರೆಮಣೆಯಲ್ಲಿ ಕುಳಿತುಕೊಳ್ಳುವುದನ್ನು ನೋಡುವ ನಯನಾನಂದವು ಯಾರಿಗೆ ಬೇಡ? ತಂದೆ ತಾಯಿಗಳಿಗಂತೂ "ಹೋಗುವ ದೋಣಿಯಲ್ಲಿ ಸಾಗುವ ಸರಕೆ"ಂಬಂತೆ ಈ ದೊಡ್ಡ ಖರ್ಚಿನೊಡನೆ ಇದೊಂದೂ ತಿಳಿಯದಂತೆ ಸೇರಿಹೋದ ಹಾಗಾಯಿತು. ಇಲ್ಲಿ ಆಕ್ಷೇಪ ಬರಬೇಕಾದರೆ ಹುಡುಗನ ತಂದೆಯ ಕಡೆಯಿಂದ. ಮುಂದಕ್ಕೆ ಬೆಳೆದು ದೊಡ್ಡದಾಗತಕ್ಕ ವರದಕ್ಷಿಣೆಯ ಫಲವನ್ನು ತೆನೆಯಲ್ಲಿಯೇ ಕ್ಕೊಯ್ದು ಬಿಡಲು ಅವನಿಗಿಷ್ಟವಿಲ್ಲದಿರುವುದು ಸ್ವಾಭಾವಿಕ. "ಹುಡುಗನಿಗಾಗಲೀ ಹುಡುಗಿಗಾಗಲೀ ಇಷ್ಟುಬೇಗನೇ ವಿವಾಹವಾಗುವ ಆವಶ್ಯಕತೆಯೇನು?" ಎಂಬ ನೆವನವನ್ನೊಡ್ಡಿ ಆತನು ಎಲ್ಲಿಯಾದರೊಮ್ಮೆ ಮಾತು ಕಥೆಗಳ ಮಧ್ಯದಲ್ಲಿ ತನ್ನ ಅಸಮ್ಮತಿಯನ್ನು ಸೂಚಿಸಿದರೆ, "ಅದಲ್ಲದೆ, ಅನಾವಶ್ಯಕ ಆಗುವ ಎರಡು ಖರ್ಚನ್ನು ಉಳಿಸಿದಂತಾಗುವುದಿಲ್ಲವೆ? ಆಗುತ್ತದೆ ಒಟ್ಟಿಗೆ" ಎಂದು ಶೆಟ್ರು ಮಧ್ಯದಲ್ಲಿಯೇ ಬಾಯಿ ಹಾಕುತ್ತಿದ್ದರು. ಹುಡುಗನ ತಾಯಿಯಂತೂ ಮುಂದರಿದು "ಮುಂದೆ ಯಾರೋ ಏನೋ! ಮನೆಯಲ್ಲಿ ವಿವಾಹವಾಗುವ ನಮ್ಮ ಹುಡುಗನಿಗೂ ಆಗುವುದು ಚಂದ ವಲ್ಲವೆ? ಇವನಿಗೀಗ ಒಂಭತ್ತು ವರ್ಷ ತುಂಬಿದೆ. ನೆರೆಯ ಸುಬ್ಬಕ್ಕನ ಮಗನಿಗೆ ಏಳೇ ವರ್ಷದಲ್ಲಿ ಮದುವೆಯಾಗಿದೆ" ಎಂದು ಉತ್ಸಾಹದಿಂದ ಮುಗುಳ್ನಗೆ ನಕ್ಕು, ಶೆಟ್ರ ಸೂಚನೆಯನ್ನು ಅನುಮೋದಿಸುತ್ತಿದ್ದಳು.

ಅಂತೂ ಇಂದೇ ವಿವಾಹದಿನ. ಧಾರೆಗಿಂತ ಸ್ವಲ್ಪ ಮೊದಲು ತನ್ನ ಕುತ್ತಿಗೆಯಲ್ಲಿದ್ದ ಮಿರಿಮಿರಿ ಮಿಂಚುವ ಕಂಠೀಸರವನ್ನು ಮೆಲ್ಲಗೆ ತೆಗೆದು ಆಡುತ್ತಿದ್ದ ಅಂದಿನ ಮದುವಣಿಗ ಹುಡುಗನೊಡನೆ ಅದನ್ನು ತನಗೆ ಕೊಡಬೇಕೆಂದು ವಧುವಾಗತಕ್ಕ ಮಗು ಛಲಹಿಡಿದು ಎರಡೂ ಕಚ್ಚಾಡಿ ಕೊಂಡು ಬೊಬ್ಬೆಯೆಬ್ಬಿಸಿ ಅಳುತ್ತಿರುವಾಗ ಆ ಮಕ್ಕಳ ತಾಯಂದಿರಿಗೆ ಅವನ್ನು ಸಂತೈಸಲು ಸಾಕುಸಾಕಾಯಿತಂತೆ!

ಔತಣ ಸಮಾರಂಭವು ಮುಗಿದು ರಾತ್ರಿ ಹತ್ತು ಘಂಟೆಗೆ ಧಾರೆ. ವಧೂವರರನ್ನು ಶೃಂಗರಿಸಿ ಧಾರೆಯ ಮಂಟಪದಲ್ಲಿ ಕುಳ್ಳಿರಿಸಿದ್ದಾರೆ.

ಸಣ್ಣ ವಧುವಿನ ತಾಯಿಯು ಮಣೆಯಲ್ಲಿ ಕುಳಿತು, ಮಗುವನ್ನೆತ್ತಿ ಕೊಂಡು, ಅಳದಂತೆ ಸಂತೈಸುತ್ತಿದ್ದಾಳೆ. ತನ್ನ ಜೀವನವನ್ನೇ ಕೆಡಿಸುವ ದೊಡ್ಡ ಬಂಧನವಿದು ಎಂಬುದನ್ನರಿಯದ ಆ ಎಳೇ ಮಗುವು ಸ್ವೇಚ್ಛೆಯಿಂದಾಡುತ್ತಿದ್ದ ತನ್ನನ್ನು ಈ ರೀತಿ ಏನೇನೋ ಮಾಡಿ ಹಿಡಿದುಬಿಟ್ಟಿದ್ದಾರೇಕೆಂಬ ಸದ್ಯದ ಬಂಧನಕ್ಕಾಗಿಯೇ ಒಂದೇ ಸವನೆ ರೋಧಿಸುತ್ತಿದೆ ವರನಾದ ಹುಡುಗನಿಗಾದರೂ ಯಾವ ಸಮಜಾಯಿಸುವಿಕೆಯ ಅಗತ್ಯವೂ ಇರಲಿಲ್ಲ. ಧಾರೆಯ ಮಣೆಯಲ್ಲಿ ಎತ್ತಿ ಕುಳ್ಳಿರಿಸಿದ್ದೊಂದೇ ತಡ. ತನ್ನ ಮೈ ಕೈಯ ಆಭರಣಗಳ ಚಂದ, ತಲೆಯ ಜರಿ ಮುಂಡಾಸಿನ ಹೊಳಪು, ಮದುವೆ ಚಪ್ಪರದ ಕನ್ನಡಿ, 'ಗ್ಲಾಸು', 'ಗ್ಯಾಸ್' ದೀಪಗಳ ಪ್ರಕಾಶ, ಇವುಗಳ ಆಕರ್ಷಣದಿಂದ ತಟಸ್ಥನಾಗಿ ದುರದುರನೆ ನೋಡುತ್ತಿದ್ದನು.

ಹತ್ತಿರದ ಇನ್ನೊಂದು ಮಣೆಯಲ್ಲಿ ಕೆಂಪು ಮುಂಡಾಸು ಬಿಳಿ ಮೀಸೆಗಳ ಹೊಳಪಿನ ಲಿಂಗಪ್ಪ ಹೆಗ್ಡೆಯವರು ನಾಲ್ಕನೇ ಸಲದ ಹೊಸ ಮದುವಣಿಗನಾಗ 'ತನಗೆ ಧಾರೆಯ ಮಣೆಯೆಂದರೆ ನಿತ್ಯದ ಕಾಲುಮಣೆಯಷ್ಟು ಸುಲಭ'ವೆಂಬಂತೆ ಅಲಕ್ಷ್ಯಭಾವದಿಂದ ಕುಳಿತಿದ್ದಾರೆ. ಈ ವರೆಗೆ ಅನುಭವಿಸುತ್ತಿದ್ದ ಹಳೆಯ ದುಃಖದ ಮಡುವಿನಿಂದೆದ್ದು, ಇನ್ನೊಂದು ಹೊಸ ಶೋಕದ ಕುಂಡದಲ್ಲಿ ಬೀಳಲಿಕ್ಕಿರುವ ವಧುವು ಬಳಿಯಲ್ಲೇ ಕುಳಿತು, ತಲೆಬಗ್ಗಿಸಿ, ಕಣ್ಣೀರು ಸುರಿಸುತ್ತಿದ್ದಾಳೆ!

ಅಲ್ಲೇ ಚಪ್ಪರದಲ್ಲಿ ಒಂದು ಮೂಲೆಯಲ್ಲಿ ನವನಾಗರಿಕ ತರುಣರದೊಂದು ಸಭೆ. ಒಬ್ಬೊಬ್ಬರೇ ಹರಟೆ ಹೊಡೆಯುತ್ತಿದ್ದಾಗ "ಅದಿರಲಿ ಅಲ್ಲಿ ನೋಡಿ ಆ ನವವಧುವನ್ನು! ಮುದುಕಿಗೂ ಮುದುಕನಿಗೂ ಮದುವೆ ಹಲ್ಲು ಮುರಿದ ಆ ಮುದುಕನಿಗೇಕಯ್ಯಾ ಈ ಕಾರ್ಬಾರು? ಮದುವೆಯಾಗಿ ಹುಡುಗಿ ತರುವುದೆಂದರೆ ಎಲೆ ಅಡಿಕೆ ಮಡಿ ಮಾಡಲು ಒಂದು ಜನ ತರುವುದೆಂದೇ ಇವನ ಭಾವನೆಯೋ ಹೇಗೆ?" ಎಂದು ಒಬ್ಬ ತರುಣನು ಪ್ರಶ್ನಿಸಿದನು. ಎಲ್ಲರೂ ಗೊಳ್ಳೆಂದು ನಕ್ಕುಬಿಟ್ಟರು. ಆದರೇನು! ಶೆಟ್ರ ಮನೆಯ ಮದುವೆಯಂತೂ ಆಗಿಯೇ ಹೋಯಿತು.